ಕರ್ನಾಟಕ ಸರ್ಕಾರ

# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಸಂಪುಟ–2 ಸಂಚಿಕೆ–5 ದಿನಾಂಕ : 10.04.2018 ಕೊಡಗು ರೂ. 20/–



## ಪೊನ್ನಿ- ಮಾಯಿ-ಸುಗ್ಗಿ

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**



22-1-18 ರಂದ್ ಸುಳ್ಯಲಿ ನಡ್ಡ
ಭಾಷಾ ಸೌಹಾರ್ದ ಸಂಭ್ರಮ ಸಮಾರಂಭದ ಉದ್ಘಾಟನೆ



ಅಕಾಡೆಮಿನ ಅಧ್ಯಕ್ಷರ್ ಮತ್ತೆ ಸದಸ್ಯರಿಗೆ ಗೌರವ ಸಮರ್ಪಣೆ



ಮರಗೋಡು ಅರುಣೋದಯ ಕಲಾತಂಡಂದ ಸಾಂಸ್ಕೃತಿಕ ಕಾರ್ಯಕ್ರಮ

# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್

ಶ್ರೀ ಪಿ.ಸಿ. ಜಯರಾಮ

ಸಂಪಾದಕರ್

ಶ್ರೀ ಬಾರಿಯಂಡ ಜೋಯಪ್ಪ

ಪ್ರಕಾಶಕರ್

ಶ್ರೀ ಉಮರಬ್ಬ



ಹಸೆ

**HINGARA**
A Quarterly Magazine

Vol -2, Issue - 5

Date : 10-04-2018

Page : viii + 78

Copies : 500

RNI No. : KARARB / 2016 / 69571

Price : Rs. 20/-

KODAGU

Cover Design : Dhivyashree K.R., Sri Krishna Printers

Printed by UMARABBA on behalf of Registrar, Karnataka Arebhase Samskruthi Mathu Sahithya Academy, and Published by UMARABBA on behalf of Registrar, Karnataka Arebhase Samskruthi Mathu Sahithya Academy on behalf of KARNATAKA AREBHASE SAMSKRUTHI MATHU SAHITHYA ACADEMY (Name of the Owner) and Printed at SRI KRISHNA COMPUTERS & PRINTERS, Pooja Arcade, Jr. College Road, Madikeri, Kodagu District. And Published at Karnataka Arebhase Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : Umarabba.

www.arebhasheacademy.com. Email : arebaseacademy@gmail.com.

# ಅಧ್ಯಕ್ಷರ ನುಡಿ

ಕರ್ನಾಟಕ ರಾಜ್ಯ ಸರಕಾರ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಗೆ ಹೊಸ ಸಮಿತಿ ರಚನೆ ಮಾಡಿ ಆದೇಶ ಮಾಡಿಟು. ಹನ್ನೊಂದ್ ಜನ ಸದಸ್ಯರ್ನ ಆಯ್ಕೆ ಮಾಡ್ದ ಮೇಲೆ ಮತ್ತೆ ಮೂರ್ ಜನರ್ನ ಸಹ ಸದಸ್ಯರನ್ನಾಗಿ ಆಯ್ಕೆ ಮಾಡ್ತ್. ಈಗ ಒಬ್ಬ ಅಧ್ಯಕ್ಷ ಮತ್ತೆ ಹದ್ನಾಕ್ ಜನ ಸದಸ್ಯರ ಹೊಸ ಸಮಿತಿ ಅಸ್ತಿತ್ವಕೆ ಬಂದ್ 15-12-2017 ರ್‌ಂದ 15-12-2020 ರ ವುಂಟ್ಟ ಕಾರ್ಯನಿರ್ವಹಿಸುವ ಅಧಿಕಾರ ಹೊಂದಿಟು. ಈ ಹಿಂದೆನೂ ರಿಜಿಸ್ಟ್ರಾರ್ ಆಗಿದ್ದ ಶ್ರೀ ಉಮರಬ್ಬನವು ಈಗಳೂ ರಿಜಿಸ್ಟ್ರಾರ್ ಆಗಿ ಸಮಿತಿ ಮತ್ತೆ ಸರಕಾರದ ನಡುಲಿ ಸೇತುವೆಯಂಗೆ ಕೆಲ್ಸ ಮಾಡ್ತೊಳೊ.

ಹೊಸ ಸಮಿತಿನ ಆಯ್ಕೆ ಮಾಡ್ದ ಸರಕಾರಕ್ಕೆ ಧನ್ಯವಾದಗ. ಆಯ್ಕೆಯಾದ ಎಲ್ಲಾ ಸದಸ್ಯರಿಗೆ ಶುಭಾಶಯಗ.

ತಾರೀಕ್ 22-12-2017 ರಂದ್ ಹೊಸ ಸಮಿತಿ ಅಧಿಕಾರ ಪಡ್ಕಂಡತ್. 02-01-2018 ರಂದ್ ಸರ್ವ ಸದಸ್ಯರ ಸುರೂನ ಸಭೆ ನಡ್ತ್. 'ಅರೆಭಾಷೆ-ಭಾಷಾ ಸೌಹಾರ್ದ ಸಂಭ್ರಮ' ಮತ್ತೆ ಅಕಾಡೆಮಿನ ಹೊಸ ಅಧ್ಯಕ್ಷರ್ ಮತ್ತೆ ಸದಸ್ಯರಿಗೆ ಅಭಿನಂದನಾ ಸಮಾರಂಭ 22-01-2018 ರಂದ್ ಸುಳ್ಯದ ಶ್ರೀ ದುರ್ಗಾ ಪರಮೇಶ್ವರಿ ಕಲಾಮಂದಿರಲಿ ನಡ್ಸಲಾತ್. ಎರಡನೇ ಕಾರ್ಯಕ್ರಮ 02-03-2018 ರಂದ್ ಮಡಿಕೇರಿನ ಕೊಡಗು ಗೌಡ ವಿದ್ಯಾ ಸಂಘದ ಸಭಾಂಗಣಲಿ 'ಕವನ-ಕುಂಚ' ಕಾರ್ಯಕ್ರಮ 2018 ತ್ತೇಳಿ ನಡ್ಸಲಾತ್.

ಅಕಾಡೆಮಿನ ಮುಂದೆ ಬಹಳಷ್ಟ್ ಯೋಜನೆಗ ಒಳೊ. ಅರೆಭಾಷೆ ಪದಕೋಶ ರಚನೆ ಆಕು. ಅರೆಭಾಷೆ ಕಲಾಗ್ರಾಮ ರಚನೆ ಆಕು. ಅರೆಭಾಷೆ ಅಧ್ಯಯನ ಪೀಠ ರಚನೆ ಆಕು. ಬೇರೆ ಭಾಷೆಗಳ ಕೃತಿಗಳ್ನ ಅರೆಭಾಷೆಗೆ, ಅರೆಭಾಷೆ ಕೃತಿಗಳ್ನ ಬೇರೆ ಭಾಷೆಗೆ ಭಾಷಾಂತರ ಮಾಡೊಕು. ಯಕ್ಷಗಾನ, ನಾಟಕ ಶಿಬಿರಗಳ್ನ ಏರ್ಪಾಡ್ ಮಾಡೊಕು. ಭಾಷೆ ಮತ್ತೆ ಸಂಸ್ಕೃತಿ ಉಳಿಯೊಕುತ್ತೇಳ್ರೆ

ಸಮಾಜದ ತಳಮಟ್ಟಂದಳೆ ಕಾರ್ಯಕ್ರಮ ರೂಪುಸೊಕು. ಆ ನಿಟ್ಟ್‌ಲಿ ಅಕಾಡೆಮಿ ತುಂಬಾ ಕುಸಿಂದ ಯೋಜನೆ ರೂಪಿಸಿದೆ. ಅರೆಭಾಷೆನ ಸಂಪತ್ ವಿದ್ಯಾರ್ಥಿಗಳಿಗೆ ಗೊತ್ತಾಕು. ಸಮಾಜದ ಕುಡಿಗಳೇ ಮಕ್ಕ. ಹಂಗಾಗಿ ಶಾಲಾ ಕಾಲೇಜ್ ಪಠ್ಯಪುಸ್ತಕಲಿ ಅರೆಭಾಷೆ ಸಾಹಿತ್ಯ ಬರೊಕು. ಆ ನಿಟ್ಟ್‌ಲಿ ಸಂಬಂಧಪಟ್ಟವರೊಟ್ಟಿಗೆ ಕಾಗದ ವ್ಯವಹಾರ ನಡ್ಸಿಯೊಳೊ.

ಅರೆಭಾಷೆ ಅಕಾಡೆಮಿನ ಸುರೂನ ಅಧ್ಯಕ್ಷರಾಗಿದ್ದ ಶ್ರೀ ಎನ್.ಎಸ್. ದೇವಿಪ್ರಸಾದ್ ಮತ್ತೆ ಅಂದ್‌ನ ಸದಸ್ಯರ್ ಅಲ್ಲದೆ ಎರಡನೇ ಸಮಿತಿನ ಅಧ್ಯಕ್ಷರಾಗಿದ್ದ ಶ್ರೀ ಕೊಲ್ಯದ ಗಿರೀಶ್ ಮತ್ತೆ ಸದಸ್ಯರ್ ಒಳ್ಳ ಕೆಲ್ಸ ಮಾಡಿಯೊಳೊ. ಅವರ್‍ನ ಈ ಸಮೆಲಿ ಗ್ಯಾನ ಮಾಡಿಕಣೆ.

ಅಕಾಡೆಮಿ ಮೂಲಕ ಬರುತ್ತಿರುವ ಹಿಂಗಾರ ತ್ರೈಮಾಸಿಕದ ಎಂಟನೇ ಆವೃತ್ತಿ ಇದಾಗುಟು. ಮೌಲ್ಯಯುತ ಕೃತಿ **'ಹಿಂಗಾರ'**ಕ್ಕೆ ಸರ್ವ ಸದಸ್ಯರ್ ಸಹಕಾರ ಕೊಡ್ತಾ ಒಳೊ. ಎಲ್ಲಾ ಬರಹಗಾರರಿಗೆ, ರಿಜಿಸ್ಟ್ರಾರ್‌ನವುಕೆ **'ಹಿಂಗಾರ'**ದ ಸಂಪಾದಕರಾದ ಶ್ರೀ ಬಾರಿಯಂಡ ಜೋಯಪ್ಪನವುಕೆ ಮತ್ತೆ ಎಲ್ಲಾ ಓದುಗರಿಗೆ ನನ್ನ ಕೃತಜ್ಞತೆಗ.

10–04–2018

ಡಾ.ಪಿ.ಸಿ. ಜಯರಾಮ.

## ಸಂಪಾದಕೀಯ...

ಇದೀಗ ಅಕಾಡೆಮಿದ್ ಮೂರನೇ ಆಡಳಿತ ಮಂಡಲಿ ಅಧಿಕಾರಕ್ಕೆ ಬಂದುಟು. ಇದ್ 'ಹಿಂಗಾರ'ದ 2ನೇ ಸಂಪುಟದ ಸುರೂನ ಸಂಚಿಕೆ.

ಮಕ್ಕಳಿಗೆ ಪರೀಕ್ಷೆ ಹಬ್ಬ, ಊರವ್ಕೆ ದೇವ್ರ ಹಬ್ಬ, ಆಟಗಾರರಿಗೆ ಕ್ರಿಕೆಟ್ ಹಬ್ಬ, ಶಿವರಾತ್ರೆ, ಕಿಡ್ಡಾಸ ಆಚರಣೆ ಆತ್. ಉಗಾದಿ ಹಬ್ಬದ ಬೇವು ಬೆಲ್ಲ ತಿಂದೂ ಆತ್. ರಣ ಬಿಸ್ಲ್ ಬೇರೆ. ಕೆರೆ, ಬಾಮಿ, ತೋಡು, ಹೊಳೆಲೆಲ್ಲಾ ನೀರ್ ಬತ್ತ್‌ತಾ ಉಟ್ಟು, ಕೆಲವ್ ಕಡೆ 37–40$^{0}$C ಉಷ್ಣಾಂಶ ಏರಿಕೆ ಆಗುಟು. ಕಾಡಿಗೆ ಕಿಚ್ಚ್ ಬೀಳ್ತಾ ಉಟ್ಟು, ಕಾಡ್ ಪ್ರಾಣಿಗ ಕಾಡ್‌ಬುಟ್ಟ್ ಊರ್‌ಕಡೆ ಬೀಳ್ತಾ ಒಳೊ. ವ್ಯವಸ್ಥೆ ಇರುವ ಕೆಲ ಕಾಫಿ ತೋಟದವು ತೋಟಕ್ಕೆ ನೀರ್ ಹನ್ನಿಸಿದೊ. ಈ ನಡುವೆ ಒಂದೆರ್ಡ್ ಮಳೆನೂ ಆತ್‌ತ ಜನಕುಸಿಪಟ್ಟೊಳೊ.

ಮೂರ್ ತಿಂಗಕೊಮ್ಮೆ ಬರುವ 'ಹಿಂಗಾರ' ಜನವರಿ, ಫೆಬ್ರವರಿ, ಮಾರ್ಚ್ (ಪೊನ್ನಿ, ಮಾಯಿ, ಸುಗ್ಗಿ) ತಿಂಗಳ್ದಾಗುಟು. ಹಿರಿಯರಾದ ಶ್ರೀ ಕುಂಯಿತೋಡು ದಾಮೋದರನವರ ಕುರ್ತ್ ಶ್ರೀಮತಿ ಲೀಲಾ ದಾಮೋದರನವು ಬರ್ದೊಳೊ. ಬರಹಗಾರರ್ ತುಂಬಾ ಅಭಿಮಾನ ಮತ್ತೆ ಪ್ರೀತಿಂದ ತಮ್ಮ ಬರಹಗಳ್ನ ಬರ್ದೊಳೊ. ಇದೇ ರೀತಿಯ ಆಸಕ್ತಿ ಮತ್ತೆ ಪ್ರೀತಿ ಬರಹಗಾರರ್ಲಿ ಇರ್‌ಲಿತ ನಾವ್ ಆಸೆಪಟ್ಟವೆ. ವೈಚಾರಿಕ ಲೇಖನಗ, ಕತೆ, ಕವನ, ಅಡುಗೆ, ಅನುಭವಗಳ್ನ ಈ ಸಂಚಿಕೆಲಿ ಪ್ರಕಟಿಸಲಾಗುಟು. ಬರಹಗಾರರ್ ಒಳ್ಳೆ ಸಾಹಿತ್ಯನ ಒದಗಿಸಿಕೊಟ್ಟ್ ಈ ಸಂಚಿಕೆನ ಮೌಲ್ಯ ಹೆಚ್ಚಿಸಿಯೊಳೊ. 'ಕವನ ಕುಂಚ' ಕಾರ್ಯಕ್ರಮಲಿ ಓದಿದ ಕವನಗ ಈ ಸಂಚಿಕೆಲಿ ಮುದ್ರಣ ಕಂಡುಟು.

ಈ ಹಿಂದೆ ಪ್ರಕಟ ಆದ ಎಲ್ಲಾ ಸಂಚಿಕೆ ಲಾಯ್ಕಾಗಿ ಬಂದುಟು. ಹಿಂದೆನ ಅಧ್ಯಕ್ಷರಾದ ಶ್ರೀ ಕೊಲ್ಯದ ಗಿರೀಶ್ ಅಲ್ಲದೆ ಅಂದ್‌ನ ಸಂಪಾದಕ ಮಂಡಲಿಗೆ ಮತ್ತೆ ಸದಸ್ಯರಿಗೆ ಧನ್ಯವಾದಗ. ಇದೀಗ ಹೊಸ ಅಧ್ಯಕ್ಷರ್ ಮತ್ತೆ ಸದಸ್ಯರ್ ಅಧಿಕಾರಕ್ಕೆ ಬಂದೊಳೊ. ಈ ಸಂಚಿಕೆನ ರೂಪುಸುವಲ್ಲಿ ಸಹಕರಿಸಿದ ಅಧ್ಯಕ್ಷರ್, ರಿಜಿಸ್ಟ್ರಾರ್, ನೂತನ ಸದಸ್ಯರ್, ಎಲ್ಲಾ ಬರಹಗಾರರ್, ಕಚೇರಿ ಸಿಬ್ಬಂದಿ ಅಲ್ಲದೆ ಶ್ರೀ ಕೃಷ್ಣ ಕಂಪ್ಯೂಟರ್ಸ್ ಮತ್ತೆ ಪ್ರಿಂಟರ್ಸ್ ಇವ್ಕೆಲ್ಲವ್ಕೆ ಕೃತಜ್ಞತೆಗ.

✍ಬಾರಿಯಂಡ ಜೋಯಪ್ಪ.



# ಹಿಂಗಾರ ಒಡ್ಸಕನ

## "ಕವನ-ಕುಂಚ"ದ ಕವನ ಮಾಲೆ

# ಶ್ರೀ ವೆಂಕಟೇಶ ಸ್ತುತಿ

ನೀ ಇರ್ಕನ ನಾನ್ಯಾಕೆ ಹೆದರ್ಲಿ
ನೀ ಕೊಟ್ಟಿಯ ಉಂಬಕೆ ಅಂಬಲಿ
ವೆಂಕಟೇಶ ನೀ ಕೊಟ್ಟಿಯ ಉಂಬಕೆ ಅಂಬಲಿ ॥ನೀ ಇರ್ಕನ॥

ನಂಗೇನ್ ಗೊತ್ಲೆ ನಾ ಅಜ್ಞಾನಿ
ವರ ಕೊಟ್ಟ್ ನನ್ನ ಮಾಡ್ ಸುಜ್ಞಾನಿ
ವೆಂಕಟೇಶ ವರ ಕೊಟ್ಟ್ ನನ್ನ ಮಾಡ್ ಸುಜ್ಞಾನಿ ॥ನೀ ಇರ್ಕನ॥

ತಿರುಪತಿ ಗಿರಿವಾಸ ವೆಂಕಟೇಶ
ನಮ್ಮನೆಲಿ ಇದ್ದ್ ನೀ ಕೊಡ್ ಸಂತೋಷ
ವೆಂಕಟೇಶ ನಮ್ಮನೆಲಿ ಇದ್ದ್ ನೀ ಕೊಡ್ ಸಂತೋಷ ॥ನೀ ಇರ್ಕನ॥

ನೀ ಇದ್ದಲ್ಲಿ ಇದ್ದದೆ ಮಹಾಲಕ್ಷ್ಮೀ
ಭಾಗ್ಯವ ಕೊಡುವ ಭಾಗ್ಯಲಕ್ಷ್ಮೀ
ವೆಂಕಟೇಶ ಭಾಗ್ಯವ ಕೊಡ್‌ವ ಭಾಗ್ಯಲಕ್ಷ್ಮೀ ॥ನೀ ಇರ್ಕನ॥

ಮೂರು ವರ್ಷಕ್ಕೊಮ್ಮೆ ನಿನ್ನ ಹರಿಸೇವೆ
ಐನ್ ಮನೆಲಿ ಮಾಡಿವೆ ನಿನ್ನ ಸೇವೆ
ವೆಂಕಟೇಶ ಐನ್ ಮನೆಲಿ ಮಾಡಿವೆ ನಿನ್ನ ಸೇವೆ ॥ನೀ ಇರ್ಕನ॥

ನೀನೆಂದೆಂದ್ ಶಕ್ತಿಯ ಸಾಗರ
ನನ್ನಲ್ಲಿ ಮೂಡ್ಸ್ ನೀ ಭಕ್ತಿಯ ಸಾಕಾರ
ವೆಂಕಟೇಶ ನನ್ನಲ್ಲಿ ಮೂಡ್ಸ್ ನೀ ಭಕ್ತಿಯ ಸಾಕಾರ ॥ನೀ ಇರ್ಕನ॥

ನಮಿಗೆ ಉಟ್ಟು ನೂರೆಂಟ್ ಸಂಕಟ
ಅದರ್ನೆಲ್ಲಾ ಪರಿಹರ್ಸಿ ಕಾಪಾಡ್ ವೆಂಕಟ
ಸ್ವಾಮಿ ಅದರ್ನೆಲ್ಲಾ ಪರಿಹರ್ಸಿ ಕಾಪಾಡ್ ವೆಂಕಟ ॥ನೀ ಇರ್ಕನ॥

ದೀನಳಾಗಿ ನಿತ್ತೊಳೆ ತಲೆ ಬಗ್ಸಿ
ಹರ್ಸ್ ನೀ ವರಗಳ ಮಳೆ ಸುರ್ಸಿ
ವೆಂಕಟೇಶ ಹರ್ಸ್ ನೀ ವರಗಳ ಮಳೆ ಸುರ್ಸಿ ॥ನೀ ಇರ್ಕನ॥

ನೀ ವಳತೇಳ್ದು ನಂಗುಟ್ಟು ನಂಬಿಕೆ
ನೀ ಕಾಪಾಡ್ಕನ ನಂಗ್ಯಾಕೆ ಹೆದ್ರಿಕೆ
ವೆಂಕಟೇಶ ನೀ ಕಾಪಾಡ್ಕನ ನಂಗ್ಯಾಕೆ ಹೆದ್ರಿಕೆ ॥ನೀ ಇರ್ಕನ॥

✍ ಕಟ್ರತನ ಲಲಿತಾ ಅಯ್ಯಣ್ಣ

## ಹೊಸ ಅಧ್ಯಕ್ಷರ್ ಮತ್ತೆ ಸದಸ್ಯರ ಅಧಿಕಾರ ಸ್ವೀಕಾರ

ತಾರೀಕ್ 22-12-2017ರಂದ್ ಪೂರ್ವಾಹ್ನ 10.00 ಗಂಟೆಗೆ ಸರಿಯಾಗಿ ಹೊಸ ಅಧ್ಯಕ್ಷ ಮತ್ತೆ ಸದಸ್ಯರ್‌ಂದ ಅಧಿಕಾರ ಸ್ವೀಕಾರ ಸಭೆ ನಡ್ತ್. ಅಂದ್ ಅಕಾಡೆಮಿನ ನಿಕಟಪೂರ್ವ ಅಧ್ಯಕ್ಷ ಕೊಲ್ಯದ ಗಿರೀಶ್‌ನವ್ ಹೊಸ ಅಧ್ಯಕ್ಷರಾಗಿ ಆಯ್ಕೆಯಾದ ಪಿ.ಸಿ. ಜಯರಾಮನವುಕೆ ಹೂ ಗುಚ್ಚ ಕೊಟ್ಟ್ ಅಭಿನಂದಿಸಿ ಅಧಿಕಾರನ ಹಸ್ತಾಂತರ ಮಾಡ್ದೊ. ಹೊಸ ಅಧ್ಯಕ್ಷರ್ ಕುಸೀಂದ ಅಧಿಕಾರ ಪಡ್ಕಂಡ್ ಸಭೆನ ಉದ್ದೇಶಿಸಿ ಮಾತಾಡಿ ಹಿಂದೆನ ಅಧ್ಯಕ್ಷರಿಗೆ ಧನ್ಯವಾದ ಹೇಳಿ ಸದಸ್ಯರಿಗೆ ಶುಭಕೋರ್ದೊ.

ಹೊಸ ಸದಸ್ಯರ್ ತಮ್ಮ ತಮ್ಮ ಪರಿಚಯ ಹೇಳಿಕಂಡ್ ಕೆಲವು ಅಭಿಪ್ರಾಯಗಳ್ನ ಹೇಳ್ದೊ.

ಸಭೆಲಿ ನಿರ್ಗಮಿತ ಸದಸ್ಯರಾದ ಮಂದ್ರೀರ ಮೋಹನ್‌ದಾಸ್ ಮತ್ತೆ ಕುಡೆಕಲ್ ಸಂತೋಷ್ ಕೆಲವ್ ಸಲಹೆ ಕೊಟ್ಟೊ. ರಿಜಿಸ್ಟ್ರಾರ್ ಉಮರಬ್ಬನವು ವಂದಿಸಿದೊ.

## ಸರ್ವ ಸದಸ್ಯರ ಸುರೂನ ಸಭೆ

ತಾರೀಕ್ 02-01-2018 ರಂದ್ ಸರ್ವ ಸದಸ್ಯರ ಸುರೂನ ಸಭೆ ನಡ್ತ್. ಆ ಸಭೆಲಿ 2018ರ ಮಾರ್ಚ್ ತಿಂಗಳ ಮುಟ್ಟ ನಡೆಕಾದ ಕಾರ್ಯಕ್ರಮಗಳ ಕ್ರಿಯಾ ಯೋಜನೆ ಬಗ್ಗೆ ಚರ್ಚೆ ಮಾಡ್ದೊ.

ಸ್ಥಾಯಿ ಸಮಿತಿ ಮತ್ತೆ ಪುಸ್ತಕ ಪ್ರಕಟಣೆ ಸಮಿತಿಗೆ ಸದಸ್ಯರ್ನ ಸರ್ವಾನುಮತಂದ ಆಯ್ಕೆ ಮಾಡಲಾತ್.



ವ್ಯಕ್ತಿ ಪರಿಚಯ

# ವೈಚಾರಿಕ ನಿಲುವುನ ಧೀಮಂತರ್:

# ಶ್ರೀ ಕುಯಿಂತೋಡು ದಾಮೋದರ

ಶ್ರೀ ಕುಯಿಂತೋಡು ದಾಮೋದರನವು ಶಿಕ್ಷಣ ತಜ್ಞರೂ, ಸಾಹಿತಿಗಳೂ, ಚಿಂತಕರೂ, ಪ್ರಗತಿಪರ ಕೃಷಿಕರೂ ಆಗೊಳೊ. ವಿಚಾರವಂತರೂ, ಮಾನವತಾವಾದಿಯೂ ಆಗಿರುವ ಶ್ರೀಯುತರ್, ಮಡಿಕೇರಿ ಆಕಾಶವಾಣಿ ಕೇಳುಗರಿಗೆ ಚಿರಪರಿಚಿತರ್. ಬೊಳ್ಗಿಗೆ ಮಡಿಕೇರಿ ಆಕಾಶವಾಣಿ ಹಾಕ್ತಿದ್ದ ಹಾಂಗೆ ತೇಲಿ ಬಾವ ಅರೆಭಾಷೆನ ಭಕ್ತಿ ಗೀತೆಗ ಇವರ ಲೇಖನಿಂದ ಮೂಡಿ ಬಂದದ್ ಆಗಿದ್ದ್ ಅದರ ಕೇಳ್ದೊವು ತಲೆ ತೂಗದೆ ಇರಿಕಿಲೆ. ಅವರ ಚಿಂತನಗ ಕೇಳುಗರ ಚಿಂತನೆಗೆ ಹಚ್ಚದೆ ಇರಿಕಿಲೆ. ಶ್ರೀಯುತರ್ ಸಂಪಾಜೆ ಪ್ರೌಢ ಶಾಲೆನ ಸ್ಥಾಪಕ ಮುಖ್ಯೋಪಾಧ್ಯಾಯರ್ ಆಗಿ, ಮುಂದೆ ಆ ಶಾಲೆ ಪದವಿಪೂರ್ವ ಕಾಲೇಜ್ ಆಗಿ ಮೇಲ್ದರ್ಜೆಗೆ ಏರ್‌ಕನ ಅದರ ಪ್ರಿನ್ಸಿಪಲ್ ಆಗಿ ಸೇವೆ ಸಲ್ಲಿಸಿ ನಿವೃತ್ತರ್ ಆದೊವು.

ಕುಯಿಂತೋಡು ವೆಂಕಪ್ಪ ಮತ್ತೆ ಕಾವೇರಮ್ಮನವರ ಮಂಜ ಆಗಿ ತಾ 13.04.1936 ರ್ಲಿ ಹುಟ್ಟಿದ ಶ್ರೀಯುತರಿಗೆ ಒಬ್ಬನೇ ಅಣ್ಣ ಮತ್ತೆ ನಾಲ್ಕ್ ಜನ ಅಕ್ಕತಂಗೆಕ. ಅರಂತೋಡುನ ಬೋರ್ಡ್ ಎಲಿಮೆಂಟರಿ ಶಾಲೆಲಿ ಬಾಲಶಿಕ್ಷೆನ ಪೂರೈಸಿ, ಸಂಪಾಜೆ, ಸುಳ್ಯಲಿ ಪ್ರಾಥಮಿಕ ಶಿಕ್ಷಣ ಪಡ್ದ್, ಸುಳ್ಯದ ಗೌಡ ಬೋರ್ಡಿಂಗ್‌ಲಿ ಇದ್ದ್‌ಕಂಡ್ ಬೋರ್ಡ್ ಹೈಸ್ಕೂಲ್‌ಲಿ ಪ್ರೌಢ ಶಾಲಾ ಶಿಕ್ಷಣ ಪಡ್ದೊ. ಪದವಿ ಶಿಕ್ಷಣ ಪಡ್ದದ್ ಮಡಿಕೇರಿನ ಸಕಾರಿ ಕಾಲೇಜ್‌ಲಿ. ವಾಸ್ತವ್ಯ ಕಾಲೇಜ್ ಹಾಸ್ಟೆಲ್‌ಲಿ, ಮತ್ತೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಂದ ರಾಜ್ಯಶಾಸ್ತ್ರಲಿ ಸ್ನಾತಕೋತ್ತರ ಪದವಿನೂ ಪಡ್ದೊ. ಹೀಂಗೆ ಶೈಕ್ಷಣಿಕ ಆಗಿ ತಮ್ಮ ವ್ಯಕ್ತಿತ್ವಕ್ಕೆ ಗಟ್ಟಿ ತಳಪಾಯ ಹಾಕಿಕಂಡೊ. ಭಾಗಮಂಡಲದ ಕಾವೇರಿ ಹೈಸ್ಕೂಲುಲಿ ಮತ್ತೆ ಮಡಿಕೇರಿ ಸರಕಾರಿ ಪದವಿ ಪೂರ್ವಕಾಲೇಜ್‌ಲಿ ಸಹಾಯಕ ಅಧ್ಯಾಪಕ ಆಗಿಯೂ ಶಿಕ್ಷಕ ವೃತ್ತಿನ ಅನುಭವ ಪಡ್ಕಂಡೊ.

ಮಣಿಪಾಲದ ಶಿಕ್ಷಕ ಶಿಕ್ಷಣ ಸಂಸ್ಥೆಲಿ ಬಿ.ಎಡ್. ತರಬೇತಿ ಪಡ್ದ್ ಜೂನ್ 13, 1966ರ್ಲಿ ಸಂಪಾಜೆ ಹೈಸ್ಕೂಲ್‌ನ ಮುಖ್ಯೋಪಾಧ್ಯಾಯರಾಗಿ ಜವಾಬ್ದಾರಿ ವಹಿಸಿಕಂಡೊ. ಡಿ.ಎಸ್.ಎಸ್.ಎ (ಈಗನ ಎಂ.ಎಸ್.ಡಬ್ಲ್ಯೂ) ಪದವಿ ಕೂಡ ಪಡ್ದ ಇವ್ಕೆ ಬೇರೆ ಉದ್ಯೋಗ ಪಡಿವ ಅವಕಾಶ ಇದ್ದರೂ

ಅದರ್ನೆಲ್ಲ ಕಡೆಗಣಿಸಿ ತಮ್ಮ ಸಂಪೂರ್ಣ ಶಕ್ತಿ ಪ್ರತಿಭೆನ ಈ ಶಿಕ್ಷಣ ಸಂಸ್ಥೆಗೆ ಧಾರೆ ಎರದೊ. ಶಿಸ್ತ್‌ನ, ಕಟ್ಟು ನಿಟ್ಟ್‌ನ ಅಧ್ಯಾಪಕರ್ ಆಗಿ ಗ್ರಾಮೀಣ ಪ್ರದೇಶದ ಸಾವಿರಾರ್ ವಿದ್ಯಾರ್ಥಿಗಳ ಶೈಕ್ಷಣಿಕ ಮುನ್ನಡೆಗೆ ಕಾರಣ ಆದೊ. ಇದೇ ಹೈಸ್ಕೂಲು 1985ರ್ಲಿ ಪದವಿಪೂರ್ವ ಕಾಲೇಜು ಆಗಿ ಬದಲಾವಣೆ ಆಕನ ಅದರ ಪ್ರಿನ್ಸಿಪಲ್ ಆಗಿ 1995 ರ್ಲಿ ನಿವೃತ್ತಿ ಆದೊ.

ಅವರ ಹೆಗ್ಗಳಿಕೆ ಇರುದು ಕೇವಲ ಒಂದು ಸಂಸ್ಥೆನ ದೀರ್ಘಕಾಲ ಮುನ್ನಡೆಸಿದೊತ ಅಲ್ಲ, ಬದಲಿಗೆ ಅದರ ಹೆಂಗೆ ನಡ್ಸಿಕಂಡ್ ಹೋದೊ, ವಿದ್ಯಾರ್ಥಿಗಳ ಹೇಂಗೆ ತಿದ್ದಿ ತೀಡಿದೊತೇಳುದರ್ಲಿ. ಕಲೆ ಸಾಹಿತ್ಯಲಿ ಅವುಕೆ ಇದ್ದ ಆಸಕ್ತಿ ಪರಿಶ್ರಮದೊಟ್ಟಿಗೆ ಶಿಸ್ತು ಮತ್ತೆ ಸತ್ಯ ನಿಷ್ಠುರತೆ ಸೇರಿ ಅವರ ಎತ್ತರದ ಸ್ಥಾನಲಿ ನಿಲ್ಲಿಸಿಟ್ಟು.

ಅವು ಶಿಕ್ಷಣ ಪಡ್ದ ಬೋರ್ಡ್ ಹೈಸ್ಕೂಲು ಸುಳ್ಯ ಅವರ ಅಭಿರುಚಿಗಳಿಗೆ ನೀರ್ ಎರ್ದ್ ಪೋಷಿಸಿತ್. ವಿದ್ವಾನ್ ಕೊಳಂಬೆ ಪುಟ್ಟಣಗೌಡರ ಶಿಷ್ಯ ಇವು. ಆಗ ಅಲ್ಲಿ ಸರದಿನಾಂಗೆ ವಾರಕ್ಕೆ ಒಮ್ಮೆ ಜರ್‌ಗ್‌ತ್ತಿದ್ದ ಅಧ್ಯಾಪಕರ ತಾಳಮದ್ದಲೆ ಅವರ ಪ್ರತಿಭೆಗೆ ಸಾಣೆ ಹಿಡ್ದಂರ್ದ ಅವೊಬ್ಬ ಯಕ್ಷಗಾನಪಟು ಆಗಿ ಮೊರಹೊಮ್ಮಿಕೆ ಸಾಧ್ಯ ಆತ್. ಮಕ್ಕಳ ಕೂಟದ ಯಕ್ಷಗಾನ ತಾಳಮದ್ದಲೆಗೆ ಇವೇ ಭಾಗವತರ್. ಇಂಪಾದ ಕಂಠ, ಅಗಾಧ ಶ್ರದ್ಧೆ, ಅಪಾರ ಪರಿಶ್ರಮಂದ ಅವು ತಾಳಮದ್ದಲೆಲಿ ತಮ್ಮನ ತಾವು ತೊಡ್ಗಿಸಿಕಂಡಿದ್ದೊ.

ಹೀಂಗೆ ಪಡ್ದ ಅನುಭವಗಳೇ ಮುಂದೆ ಸಂಪಾಜೆ ಹೈಸ್ಕೂಲು, ಪದವಿಪೂರ್ವ ಕಾಲೇಜುಗಳಲ್ಲಿ ನಿರಂತರ ಸಾಂಸ್ಕೃತಿಕ ಚಟುವಟಿಕೆಗಳ ಹಮ್ಮಿಕಂಬಕೆ ಕಾರಣ ಆತ್. ಮೈಸೂರ್‌ನ ರಾಮಕೃಷ್ಣ ಇನ್‌ಸ್ಟಿಟ್ಯೂಟ್ ಆಫ್ ಮೋರಲ್ ಸೈನ್ಸ್ ಅಂಡ್ ಎಜುಕೇಶನ್ ಇಲ್ಲಿ ಪಡ್ದ ನೈತಿಕ ಮತ್ತೆ ಅಧ್ಯಾತ್ಮಿಕ ಶಿಕ್ಷಣ ಅವರ್ಲಿ ಅಂತರ್ಗತ ಆಗಿ ಇದ್ದ ವಿಚಾರವಂತಿಕೆನ ಮತ್ತಷ್ಟ್ ಪ್ರಖರಗೊಳ್ಸಿತ್.

ಇವರ ಕೈ ಹಿಡ್ದ್ ಸುಖಮಯ ದಾಂಪತ್ಯಕ್ಕೂ ಆದರ್ಶ ಕುಟುಂಬಕ್ಕೂ ಪೂರಕ ಆದೊವು ಶ್ರೀಮತಿ ಸರಸ್ವತಿ. ಇವು ಕೊಡಗುನ ಕಾರುಗುಂದದ ಕುಂಜಿಲನ ಸೋಮಪ್ಪ, ಬೊಳ್ಳಮ್ಮ ದಂಪತಿಯ ಪುತ್ರಿ. ಪದವಿಪೂರ್ವ ಶಿಕ್ಷಣ ಪೂರೈಸಿ ಮದುವೆ ಆಗಿ ಗಂಡನ ಮನೆ ಸೇರಿ ಕೌಟುಂಬಿಕ, ಸಾಂಸ್ಕೃತಿಕ, ಕೃಷಿ ಸಂಬಂಧಿ ಚಟುವಟಿಕೆಗಳ್ಲಿ ತಮ್ಮನ್ನ ತೊಡಗಿಸಿಕಂಡ್ ಮಾದರಿ ಆದವು. ಇವುಕೆ ಅಮೃತರಾಜ್ ಮತ್ತೆ ಸವಿತಾ ತೇಳುವ ಇಬ್ಬೊರು ಮಕ್ಕ.

ಶಾಲೆ ಕಾಲೇಜುನ ದಿನಗಂಳ್ಲಲೇ ಲೇಖನಗಳ ಬರೆತಿದ್ದೊ. ಪದ್ಯ ಬರ್ದ್ ತಾವೇ ರಾಗ ಹಾಕಿ ಹಾಡ್ದು ಇವರ ಹವ್ಯಾಸ ಆಗಿತ್ತ್. ಆ ಹವ್ಯಾಸ ಇಂದ್‌ಗೂ ಮುಂದುವರ್ಕಂಡ್ ಬಂದುಟು. ನಿವೃತ್ತಿ ಆದ ಮೇಲೆ ಹೆಚ್ಚು ಹೆಚ್ಚು ಸಾಹಿತ್ಯ ಕೃಷಿಲಿ ತಮ್ಮನ್ನ ತೊಡ್ಗಿಸಿಕಂಡೊ. 'ನಾನು ಹಾಡಿದೆ', 'ನಮ್ಮೂರ ಹಾಡು', ಭಕ್ತಿ ಗೀತೆಗಳು, 'ಪ್ರೇಮ ವಿಹಾರ' ಅವರ ಪ್ರಕಟಿತ ಕವನ ಸಂಕಲನಗ. 'ಏನಿದು ವೇಷ ನಿನ್ನದು ಈಶ' ತೇಳಿ ಭಕ್ತಿಂದ, ಸಲುಗೆಂದ ಈಶ್ವರನ ಮೂದಲಿಸುದು, ಹೆಂಗೆ ನಿನ್ನ ಮರೆಯಲ್ಲವ್ವ ? ಅಂತ ಅವ್ವನ ಬಗ್ಗೆ ಮಕ್ಕಳಿಗಿರುವ ಅಂತಃಕರಣ ಬುಡ್ಸಿ ತೋರ್ಸುದು, 'ಮನ್ಸೆಂಬ ಮಹಾದೇವ' ತೇಳಿ ತನ್ನ ಅಧೀನ ಇರುವ ಅಂತರಾತ್ಮಂಗೆ ತಾನೇ ಶರಣಾಗಿ ನಮಸ್ಕಾರ

ಮಾಡುದು, 'ಫೀ.ಮಾ.ಕಾರ್ಯಪ್ಪ' ಕವನಲಿ ಕೊಡಗ್‌ನ ಧೀರ ಯೋಧನ ಎಣೆ ಇಲ್ಲದ ಸಾಹಸಕ್ಕೆ ಮನ್ಸ್ ತುಂಬಿ ಕೃತಜ್ಞತೆ ಸಲ್ಲ್‌ಸುದು. ಹಿಂಗೆ ಅವರ ಸಂಕಲನದ ಕವಿತೆಗ ಎಲ್ಲ ವೈವಿಧ್ಯ ವಸ್ತುಗಳ ಒಳಗಂಡ್ ಪ್ರಾಸಬದ್ಧ ಆಗಿ ಲಯಬದ್ಧ ಆಗಿ ಓದೊವುಕೆ ಮಧುರಾನುಭೂತಿ ಕೊಟ್ಟದೆ.

'ಇರುವುದೆಲ್ಲವ ಬಿಟ್ಟು' ತೆಳುವ ಪ್ರೊ. ಪ್ರಭಾಕರ ಶಿಶಿಲರ ಪ್ರಸಿದ್ಧ ಕಾದಂಬರಿನ 'ಇರುದರನೆಲ್ಲ ಬುಟ್ಟ್' ತೇಳುವ ಹೆಸರ್‌ಲಿ ಅನುವಾದ ಮಾಡಿಯೊಳೊ. ಉದಯೋನ್ಮುಖ ಬರಹಗಾರರಿಗೆ ಬರಿಯಕೆ ಹುರಿದುಂಬಿಸುವ, ಅವು ಬರ್ದ ಪುಸ್ತಕಗಳ ಕೊಂಡ್‌ಕಂಡ್ ಪ್ರೋತ್ಸಾಹ ಕೊಡುವ ಅಪರೂಪದ ಗುಣ ಇವರ್ದ್. ಅವರ ಮನೆ ಮಹಡಿಲಿ ಇರುವ ಒಂದು ಕೋಣೆಲಿ ಅಚ್ಚುಕಟ್ಟಾದ ಪುಸ್ತಕ ಭಂಡಾರ ಉಟ್ಟು. ವೈಚಾರಿಕ, ವೈಜ್ಞಾನಿಕ, ಅಧ್ಯಾತ್ಮಿಕ ಮತ್ತೆ ಸೃಜನಶೀಲ ಕೃತಿಗ ಇಲ್ಲಿನ ಕಪಾಟುಗಳ ಅಲಂಕರಿಸಿಯೊಳೊ. ಮನೆ ಎಷ್ಟೇ ದೊಡ್ಡದಿದ್ದರೂ, ಎಷ್ಟೇ ಅಲಂಕಾರ ಮಾಡಿರೂ ಪುಸ್ತಕಗಳ ಸಂಗ್ರಹ ಇಲ್ಲದಿದ್ದರೆ ಅದ್ ಅಪೂರ್ಣತಳೇ ಲೆಕ್ಕ. ಆ ಕೊರತೆ ಇವರ ಮನೆಲಿ ಇಲ್ಲೆ. ಸಾಹಿತ್ಯಾಸಕ್ತರ ಮೆಚ್ಚಿನ ತಾಣ. ಇವರ ಮನೆ 'ಹಸಿರು'. ನಾಗತಿಹಳ್ಳಿ ಚಂದ್ರಶೇಖರ, ಎನ್.ಮಹಾಬಲೇಶ್ವರ ಭಟ್, ಅಬ್ದುಲ್ ರಷೀದ್ ಇಂತ ಸಾಹಿತಿಗ ಇವರ ಮನೆಗೆ ಭೇಟಿ ಕೊಟ್ಟ್ ಆದರೋಪಚಾರ ಪಡ್ದೊಳೊ.

2015ರ್ಲಿ ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ಚೆಂಬು ಗ್ರಾಮಲಿ ಆಕನ ಸ್ವಾಗತ ಸಮಿತಿನ ಗೌರವಾಧ್ಯಕ್ಷರ್ ಆಗಿ ಸಮ್ಮೇಳನ ಅಚ್ಚುಕಟ್ಟಾಗಿ ನಡ್ಸಿಕೊಟ್ಟೊಳೊ. ಮಂಜ ಅಮೃತರಾಜನೂ ಸಭೆ ಸಮಾರಂಭ ನಡ್ಸುದಲ್ಲಿ ಸಹಕಾರ ಕೊಟ್ಟುಕಂಡ್ ಇದ್ದ್ ಇಡೀ ಕುಟುಂಬವೇ ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳಿಗೆ ತೆರ್ಕಂಡ್ ಉಟ್ಟು. ಪ್ರತಿಭಾವಂತ ಕವಯಿತ್ರಿ ಸ್ಮಿತಾ ಅಮೃತರಾಜ್ ಇವರ ಸೊಸೆ. ಎಂಟನೇ ತರಗತಿಲಿ ಓದುವ ಪಿಳ್ಳಿ ಆಶಯನೂ ಇಷ್ಟೆ ಸಣ್ಣ ಪ್ರಾಯಲೇ ಕವನ ಸಂಕಲನ ಹೊರತಂದ್, ಲೇಖನಗಳ ಬರ್ದ್ ಭರವಸೆ ಮೂಡಿಸಿಟ್ಟು. ಅಕ್ಕ ಮನಾಲಿ ಶಾಸ್ತ್ರೀಯ ಸಂಗೀತ ಮತ್ತೆ ಭರತನಾಟ್ಯಲಿ ಹೆಜ್ಜೆ ಗುರುತು ಮೂಡಿಸಿಕಂಡ್ ಉಟ್ಟು.

ಕೃಷಿ ಇವರ ಮೆಚ್ಚಿನ ಹವ್ಯಾಸಗಳ್ಲಿ ಒಂದು. ರಬ್ಬರ್ ಕೃಷಿಲಿ ಬಾರೀ ಹಿಂದೆನೇ ದಾಖಲೆ ಸ್ಥಾಪಿಸಿದವು. ಹಾಂಗೇತೇಳಿ ಅದೇನ್ ಸುಲ್ಭಲಿ ಆದ ಕೆಲ್ಸ ಅಲ್ಲ. ರಬ್ಬರ್ ಒಂದೇ ಅಲ್ಲ ಅಡಿಕೆ ಕೃಷಿಲೂ ಕೂಡಾ ಉತ್ತಮ ಸಾಧನೆ ಇವರ್ದ್. ಮನೆ ಅಂಗಳಲಿ ನಳನಳಿಸುವ ಹೂತೋಟ, ಹಣ್ಣ್‌ನ ಮರಗ, ತರಕಾರಿ ಬೆಳೆಗ ಅವರ ಕೃಷಿ ಸಂಸ್ಕೃತಿಗೆ ಸಾಕ್ಷಿ ಆಗಿ ಒಳೊ. ವೃತ್ತಿ ಸಂಬಂಧದ ಅಧ್ಯಯನ, ಅಧ್ಯಾಪನ ಆಡಳಿತಗಳೊಟ್ಟಿಗೆ ಕೃಷಿನ ಇಷ್ಟೊಂದು ಹಚ್ಚಿಕಂಡ್ ಸಫಲರಾದ್ ನಿಜವಾಗಿಯೂ ವಿಶೇಷ. ಇವರ ಮಡದಿ ಶ್ರೀಮತಿ ಸರಸ್ವತಿಯವರ ಪೂರ್ಣ ಸಹಕಾರ ಈ ಸಾಧನೆಯ ಹಿಂದೆ ಉಟ್ಟುತ ಹೇಳಿರೆ ಅದ್ ಅತಿಶಯೋಕ್ತಿ ಆಕಿಲೆ.

'ದೇಶ ನೋಡು, ಕೋಶ ಓದು' ತೇಳುವ ಗಾದೆನೇ ಉಟ್ಟು. ನಾವೆಲ್ಲ ಕೋಶ ಓದಿರೂ ದೇಶ ನೋಡ್ದು ಕಮ್ಮಿತೇ ಹೇಳಕ್. ವಿದೇಶದ ಜನಂಗಳಿಗೆ ಹೋಲಿಸಿರೆ ನಮ್ಮ ದೇಶದವರ್ಲಿ ಪ್ರವಾಸ ಪ್ರಿಯತೆ ಕಮ್ಮಿತೇ ಹೇಳಕ್. ಆದರೂ ಪ್ರವಾಸ ಮಾಡ್ದರ ಇಷ್ಟ ಪಡೊವೂ ಒಳೊ. ಅಂತವರ್ಲಿ ಇವು ಮಂಚೂಣಿಲಿ ನಿತ್ತವೆ. ಮಡಿಕೇರಿ ಕಾಲೇಜ್‌ಲಿ

ವಿದ್ಯಾರ್ಥಿ ಆಕಂಡಿರ್‌ಕನೇ 1958ರ್ಲಿ ದಖಿನ್ ಪ್ರಸ್ಥಭೂಮಿ ಪ್ರವಾಸ ಕೈಗೊಂಡಿದ್ದೊ. ಆಗ ಹಂಪೆ, ಅಜಂತಾ, ಎಲ್ಲೋರ, ಪೂನ ಈ ಜಾಗೆಗಳಿಗೆ ಹೋದ್ದ್, ಹಾಂಗೇ 1959ರ್ಲಿ ಕೈಗೊಂಡ ಆಗ್ರ, ಮಥುರಾ, ಫತೇಪುರ್ ಸಿಕ್ರಿ, ದಿಲ್ಲಿ, ಮುಂಬಯಿ, ಜಯಪುರ ಇತ್ಯಾದಿ ಜಾಗೆಗಳ ಒಳಗಂಡ ಉತ್ತರ ಭಾರತ ಪ್ರವಾಸ ಅವರ ಪ್ರವಾಸ ಪ್ರಿಯತೆಗೆ ನಾಂದಿ ಹಾಡ್ತ್. ನಿವೃತ್ತಿ ಆದ ಮೇಲೆ ಮಡದಿ ಸಮೇತ ದೇಶದ ಉದ್ದಗಲಕ್ಕೂ ಸಂಚಾರ ಮಾಡಿ ಬಂದೊಳೊ. 1999ರ್ಲಿ 32 ದಿನಗಳ ಉತ್ತರ ಭಾರತ ಮತ್ತೆ ನೇಪಾಳ ಪ್ರವಾಸ ಮಾಡ್ದ ಇವು 2005ರ್ಲಿ ಸರಸ್ವತಿ ಅವರೊಟ್ಟಿಗೆ ಮತ್ತೆ ನೇಪಾಳ ಒಳಗಂಡ ಹಾಂಗೆ ಉತ್ತರ ಭಾರತದ ಪ್ರವಾಸ ಮಾಡಿ ಬಂದೊ. 2001ರ್ಲೇ ಗುಜರಾತ್, ರಾಜಸ್ಥಾನಕ್ಕೆ ಹೋಗಿ ಬಂದಿದ್ದೊ. ಮತ್ತೆ ದಕ್ಷಿಣ ಭಾರತ, ಈಶಾನ್ಯ ಭಾರತದ ರಾಜ್ಯಗ, ಜಮ್ಮು ಕಾಶ್ಮೀರ, ಮಹಾರಾಷ್ಟ್ರ, ಭೂತಾನ ಇಲ್ಲಿರುವ ಪ್ರೇಕ್ಷಣೀಯ ಸ್ಥಳಗಳ ಸಂದರ್ಶನ ಪಡ್ದೊ.

ಇವರ ಈ ಎಲ್ಲಾ ಸಾಧನೆಗೆ ಕಲಶ ಇಸಿದ ಹಾಂಗೆ ಅವು ಮತ್ತೆ ಅವರ ಪತ್ನಿ ಶ್ರೀಮತಿ ಸರಸ್ವತಿಯವು ಒಂದು ದಿಟ್ಟ ನಿರ್ಧಾರ ತಕಂಡೊಳೊ. ಅದೇ **ಮರಣಾನಂತರ ದೇಹದಾನ**. ಇಂತ ನಿರ್ಧಾರ ಸಾಮಾನ್ಯ ಜನಿಗೆ ತಕಂಬಕೆ ಸಾಧ್ಯನೇ ಇಲ್ಲೆ. ಗರ್ಭದಾನಂದ ಸುರು ಆಗುವ ಷೋಡಶ ಸಂಸ್ಕಾರಗಲ್ಲಿ ಅಂತ್ಯೇಷ್ಟಿ ಕಡೇದ್ದ್, ಇದ್ ವ್ಯಕ್ತಿ ಮರಣ ಹೊಂದಿದ ಮೇಲೆ ಮಾಡುವ ಸಂಸ್ಕಾರ. ಇದರ್ಲಿ ವಿವಾಹ ಸಂಸ್ಕಾರಗಳೊಟ್ಟಿಗೆ ನಂಬಿಕೆ ಆಚರಣೆಗ ಒಬ್ಬ ವ್ಯಕ್ತಿನ ಜೀವನನ ಪ್ರಭಾವಿಸಿವೆ. ಆ ಪ್ರಭಾವಂದ ಹೊರಗೆ ಬಾದು ಕಷ್ಟ. ವೈಜ್ಞಾನಿಕ ಮನೋಭಾವ ಮತ್ತೆ ಪ್ರಖರ ವೈಚಾರಿಕತೆ ಇರೋವು ಮಾತ್ರ ಇಂತ ಸಮಾಜಮುಖಿ ನಿರ್ಧಾರಗಳ ತಕಂಬಕೆ ಸಾಧ್ಯ. 1948ರ್‌ಂದಳೇ ಭಾರತಲಿ ಅನಾಟಮಿ ಆಕ್ಟ್ ಜಾರಿಲಿ ಉಟ್ಟು, ವೈದ್ಯಕೀಯ ಶಿಕ್ಷಣಕ್ಕೆ ಮತ್ತೆ ಸಂಶೋಧನೆಗೆ ದೇಹದಾನ ಮಾಡುವ ಮತ್ತೆ ಹೊಂದುವ ಕಾನೂನು ಉಟ್ಟು. ಜ್ಯೋತಿ ಬಸು, ನಾನಾಜಿ ದೇಶಮುಖ ಅಂತಹ ರಾಜಕೀಯ ಧುರೀಣರ್ ಮಾಡ್ಯೊಳೊ. 2016 ಜೂನ್ ತಿಂಗ್ಲಲ್ಲಿ ಸುಳ್ಯ ಲಯನ್ಸ್ ಕ್ಲಬ್ ಮೂಲಕ ಮಂಗಳೂರ್ನ ಕಸ್ತೂರ್‌ಬಾ ಮೆಡಿಕಲ್ ಕಾಲೇಜಿಗೆರ ತಮ್ಮ ಮರಣಾನಂತರ ದೇಹದಾನದ ಒಪ್ಪಂದ ಆಗುಟ್ಟು.

'ನನ್ನ ದೇಹದ ಬೂದಿ ಗಾಳಿಯಲಿ ತೂರಿಬಿಡಿ
ಹೋಗಿ ಬೀಳಲಿ ಬತ್ತ ಬೆಳೆಯುವಲ್ಲಿ
ಬೂದಿಗೊಬ್ಬರದಿಂದ ತೆನೆಯೊಂದು ನೆಗೆದು ಬರೆ
ಧನ್ಯವಾಯಿತು ಹುಟ್ಟು ಸಾವಿನಲ್ಲಿ'

**–ದಿನಕರ ದೇಸಾಯಿ**

ಅವರ ಈ ಕವನ ಏನ್ ಮಾಡಿರೆ ಜೀವನಕ್ಕೆ ಸಾವುನ ಮೂಲಕ ಧನ್ಯತೆ ಒದಗಿದೆತ ಹೇಳ್ದೆ. 'ಸಾವು' ತ ಹೇಳ್ರೆ ಹೆದರಿಕೆ ಇಲ್ಲೆ. ಅದೊಂದು 'ವರ'. ಆ ವರ ಇಲ್ಲದಿದ್ದರೆ ಜಗತ್ತ್ ಹೇಂಗಿರ್ದುತ ಊಹಿಸಿಕಂಬಕೇ ಸಾಧ್ಯ ಇಲ್ಲೇತೇಳ್ದು ಶ್ರೀಯುತರ ಮುಕ್ತ ನಿರ್ಭೀತ ಅಭಿಪ್ರಾಯ ವೈದ್ಯಕೀಯ ಸಂಶೋಧನೆಗಾಗಿ ಮರಣಾನಂತರ ದೇಹದಾನ ಮಾಡುವ ನಿರ್ಧಾರ ಮಾಡ್ದ ಈ ದಂಪತಿಗಳ ಹುಟ್ಟು ಬದ್ಕಿಕಂಡ್ ಇರ್‌ಕನೇ 'ಧನ್ಯ' ಆಗುಟು.

ನಿತ್ಯ ಜೀವನಲಿ ಅವು ಅಳವಡಿಸಿಕಂಡ್ ಇರುವ ಶಿಸ್ತ್, ಸಮಯ ಪಾಲನೆ, ಶ್ರಮ, ಗೌರವ, ಜೀವನೋತ್ಸಾಹ ಅಚ್ಚರಿ ಮೂಡ್ಸಿದೆ. ಯಾದೇ ಆಡಂಬರ ಪ್ರಚಾರದ ಗೀಳ್ ಇಲ್ಲದೆ ತಮ್ಮ ಘನ ವ್ಯಕ್ತಿತ್ವಂದ ಸಮಾಜದ ಮೇಲೆ ಪ್ರಭಾವ ಬೀರಿಕಂಡ್ ಇರುವ ಶ್ರೀಯುತರ್ ನೂರ್ ಕಾಲ ಬಾಳಲಿ. ಅವರ ಮಾರ್ಗದರ್ಶನ ಎಲ್ಲವ್ಕೂ ಸಿಕ್ಕಲಿತೇಳ್ದು ಈ ಲೇಖಿಕಿನೂ ಸೇರ್ದ ಹಾಂಗೆ ಅವರ ಎಲ್ಲ ಶಿಷ್ಯ ಬಳಗದ ಆಶಯ, ಎಲ್ಲ ಜನಮನದ ಹಾರೈಕೆ.

✍ ಲೀಲಾ ದಾಮೋದರ

"ಮನ್ಸ್‌ಗೆ ವಯಸ್ಸಿಲ್ಲೆ, ಕೀರ್ತಿಗೆ ಸಾವಿಲ್ಲೆ"

* * * *

# ಕೊಟ್ಟು ಮುಚ್ಚಕ್ಕಿ

ಎದ್ರ್ ಮನೆನ ಬಾಗ್ಲ್ ಹಕ್ಕಲೆ
ಪೊರ್ಲುಲಿ ಹೂನ ಗಿಡ ಬೆಳ್ದುಟ್ಟು ...
ಹಸ್ರ್‌ನ ದಾಸಳ ಗಿಡದ ಮ್ಯಾಲೆ
ಕೊಟ್ಟುಮುಚ್ಚಕ್ಕಿ ಗೂಡ್ನ ಕಟ್ಟಿಕೆ ಹುಲ್ಲುನ ತಂದುಟ್ಟು ...
ಮೊಟ್ಟೆನ ಹಾಕಿ ಮರಿ ಮಾಡಿಟ್ಟು
ಗೂಡ್‌ಂದ ಹಾರಿಕೆ ಮರಿಗಳಿಗೆ ಕಲ್ಸುತುಟ್ಟು ...
ಹನಿಹನಿ ಎರ್ಕಿದ ನೀರ್ನ ಕಟ್ಟಲಿ
ನೀರ್ನ ಕುಡ್ದ್ ಶುದ್ದನ ಮಾಡ್ತುಟ್ಟು ...
ಬೊಳ್ಪುನ ಗಾಳಿಲಿ ಪೊರ್ಲುನ ದನಿಲಿ
ಹೊಸ ಹಾಡ್ ಹಾಡ್ತುಟ್ಟು ...
ಗಿಡಲಿ ಅರಳ್ದ ಹೂಗ ಸೇರಿ
ದಂಟ್‌ನ ಗೊಂಚ್‌ಲಿ ಪೊರ್ಲುಲಿ ಕಾಣ್ತುಟ್ಟು
ಹೂ ಬೊಳ್ಪುನ ಬಿಸ್ಲ್‌ಲಿ ಹಾರ್‌ತ ಹಾರ್‌ತ
ಕೊಟ್ಟುಮುಚ್ಚಕ್ಕಿ ಬಾನ್‌ಲಿ ಬಾತಿಲ್ಲಿ ...
ರೆಕ್ಕೆನ ಅರ್ಲ್‌ಸಿ ಖುಷಿಲಿ
ಚೆಟ್ಟ್ ತೋಟಕ್ಕೆ ಬಾತಿಲ್ಲಿ ...
ಪೊಳ್ಕಿದ ಬಳ್ಳಿಂದ ಚೆಟ್ಟ್ ಹೂ ತಿಂದ್
ಖುಷಿಲಿ ಹೊಣ್ಕಿದ್ ಹೊಣ್ಕಿದ್ ಕಂಕಣಿ ಬೀತಿಲ್ಲಿ ...
ನೆಲಲಿ ಅದ್ ಎದ್ದ್, ಬಿದ್ದದ್ ಮರ್ತ್
ಕೊಟ್ಟು ಮುಚ್ಚಕ್ಕಿ ಹಾರ್ತ ಹಾರ್ತ ಹೋತಲ್ಲಿ ...

✍ ಕೊಕ್ಕಲೆ ಮಾಲಿನಿ ಮುತ್ತಪ್ಪ

## ಚಿಂತನೆ-೧

# ಅರೆಬಾಸೆ ಎಲ್ಯಟ್ಟು ?

**✍ಎ.ಕೆ ಹಿಮಕರ**

ಹೀಂಗೊಂದು ವಿಷಯನ ಚರ್ಚೆಗೆ ತಾದು ಒಳ್ಳದ್. ಈ ಹೆಡ್ಡಿಂಗ್ ನೋಡ್ದವು ಒಮ್ಮೆ ಖಂಡಿತಾ ನಿಂತ್ ಯೋಚನೆ ಮಾಡಿವೆ, ಯಾಕೆಂತೇಳಿರೆ ಅರೆಬಾಸೆ ಗೌಡ್ರುಗ ಅಂತ ಹೇಳುವ ಜನ ಸಮುದಾಯ ಒಂದು ಉಟ್ಟು. ಅವು ಮಾತಾಡುವ ಬಾಸೆ ಅರೆಬಾಸೆಂತೇಳಿ ರೂಢಿಲಿ ಉಟ್ಟು; ಅವು ಮಾತಾಡುವ ಬಾಸೆ ಅರೆಬಾಸೆಂತೇಳಿರೆ ಅರ್ಧಬಾಸೆಂತೇಳಿಯೋ?।

ಸುಮಾರ್ 20 ವರ್ಷದಷ್ಟ್ ಹಿಂದೆ ಪ್ರಸಿದ್ಧ ಶಿಕ್ಷಣ ತಜ್ಞ ಡಾ। ಸುಕುಮಾರ ಗೌಡ್ರು, ಗೌಡ್ರೇ ಸೇರಿದ್ದ ಒಂದು ದೊಡ್ಡ ಸಭೆಲಿ ಹೇಳಿದ್ದೊ ... .."ನಾ ಬೊಳ್ಪುಂದ ಕೇಳ್ತಾ ಒಳೊ'ಅರೆಬಾಸೆ, ಅರೆಬಾಸೆ ಅಂತ, ಬಾಸೆಲಿ ಒಂದು ಸಾವಿರ ಸರ್ತಿ ಕೇಳ್ಟೆ. ಅರೆ-ಅರ್ಧ, ಕಾಲ್ ಮುಕ್ಕಾಲ್ಂತ ಇಲ್ಲೆ. ಬಾಸೆ ಯಾಗೊಳು ಇಡಿ ಬಾಸೆನೆ. ಹಾಂಗಾಗಿ ನೀವು ದಯಮಾಡಿ ಹಾಂಗೆ ಕರ್‍ಯಬೊಡಿತ ಬೇಡಿಕಂಡೊ!. ಅರೆಬಾಸೆ ತಜ್ಞ ಡಾ।ಕೋಡಿ ಕುಶಾಲಪ್ಪ ಗೌಡ್ರು, ಹಿರಿಯ ಬಾಷಾ ಪಂಡಿತ ಡಾ। ಮರಿಯಪ್ಪ ಬಟ್ರು ಕೂಡಾ ಇಂತದೇ ಅಭಿಪ್ರಾಯ ಹೇಳ್ಯೊಳ. ಹಾಂಗಾಗಿ ಈ ಬಗ್ಗೆ ಮುಂದೆ ಚರ್ಚೆ ಅಗತ್ಯ . ಯಾಕೇಂತೇಂಲ್ರೆ ನಮ್ಮ ಜನ ತಿಳ್ಕಂಡಿರ್ದು ಬೇರೆನೇ.

### ಅರೆಬಾಸೆಗೆ ಎದರ್‍ಬಾಸೆ

ಸುಮಾರ್ ಎಪ್ಪತ್ತು ವರ್ಷದ ಹಿಂದೆ ಗುತ್ತಿಗಾರ್‌ಲೊಂದು ಅರೆಬಾಸೆ ಕವಿಗೋಷ್ಠಿ ನಡ್ತ್. ಒಂದು ಇಪ್ಪತ್ತೈದ್ ಕವಿಗಳೂ ಐನೂರರಷ್ಟ್ ಕೇಳ್‌ಗರೂ ಇದ್ದೊ. ಎಲ್ಲವೂ ಗೌಡ್ರುಗಳೇ ಆಗಿದ್ದೊ. ಗೌಡ್ರಲ್ಲದವ್ಕೆ ಇದರ ಬಗ್ಗೆ ಅಸಮಾಧಾನ ಆಗಿತ್. ಪ್ರಭಾಕರ ಶಿಶಿಲಂತೇಳವರ ಉಮೇದ್‌ಲಿ ಎನ್ನೆಂಸಿಲಿ ಒಂದು ಬಹುಬಾಷಾ ಕವಿಗೋಷ್ಟಿ ನಡ್ತ್. ಅರೆಬಾಸೆ ಕವಿಗೋಷ್ಠಿಗೆ ಕೂಡ್ಲೆ ಸಿಕ್ಕಿದ ಪ್ರತಿರೋಧ ಇದ್‌ಂತ ಬಹಳ ಜನ ತಿಳ್ಕಂಡಿದ್ದೊ. ಎನ್ನೆಂಸಿಲಿ ಆ ದಿನ ಚಪ್ಪಾಳೆ ಬಿದ್ದದ್ ಮಾತ್ರ ಅರೆಬಾಸೆ ಪದ್ಯಕ್ಕೆಂತೇಳುದು ವಿಶೇಷ, ಸುಳ್ಯಲಿ ಅರೆಬಾಸೆನ ಪೊರ್ಲು ಬೇರೆನೇ. ವ್ಯಾನ್‌ಲಿ, ಬಸ್ಸ್‌ಲಿ ಪೇಟೆಲಿ, ಆಫೀಸ್‌ಲಿ ಮೊದ್ವೆಲಿ, ಜಾತ್ರೆಲಿ ಎಲ್ಲಿ ನೋಡಿರೂ

ಅರೆಬಾಸೆದೇ ಸದ್ದ್. ಕ್ಲಾಸ್‌ಲಿ ಮಾಸ್ಟ್ರ ಪಾಠ ಮಾಡ್ಕನ ಮಾತ್ರ ಗ್ರಂಥ ಕನ್ನಡ ಮಾತಾಡಿವೆ. ಜೆಗ್‌ಲಿಗೆ ಬಂದರೆ ಅವರ ಬಾಯಿಲಿನೂ ಅರೆಬಾಸೆನೇ. ಸುಳ್ಯ ಅರೆಬಾಸೆಗೆ ರಾಜಧಾನಿ! ಕೊಡ್ಗ್‌ಲಿ ಕೊಡವ ಬಾಸೆನ ಪ್ರಬಾವ ಉಟ್ಟು. ಪುತ್ತೂರು, ಬೆಳ್ತಂಗಡಿಲಿ ಅರೆಬಾಸೆ ಗೌಡ್ರುಗ ದೊಡ್ಡ ಸಂಖ್ಯೆಲಿ ಇದ್ದರೂ ಅವು ಮಾತಾಡ್ದು ತುಳು. ಅವುಕೆ ಅರೆಬಾಸೆ ಬಾದುಲೆ. ಅಂತಹ ಅವಕಾಶನೂ ಅಕ್ಕಿಲ್ಲೆ. ಹಂಗಾಗಿ ಅರೆಬಾಸೆ ಬೆಳ್ದದ್, ಮುಂದೆ ಬೆಳ್ಯೊದು ಸುಳ್ಯಲೇ. ಇದ್ಕೆ ಇಂಗ್ಲೀಷ್ ಮಾತ್ರ ಅಡ್ಡಿ ಮಾಡ್ತಾ ಉಟ್ಟು. ತುಳು ಗೌಡ್ರು ಅರೆಬಾಸೆ ಯಾಕೆ ಕಲ್ಯೊದುಲೇ?। ಇವರ ಹೆಚ್ಚಿನ ಮನೆಲಿ ಶಾಲೆಕನ್ನಡ ಮಾತಾಡಿವೆ. ಹಾಂಗಾಗಿ ತುಳು ಗೌಡ್ರಿಗೆ ಅರೆಬಾಸೆ ಕಲ್ಸುವ ಪ್ರಯತ್ನ ಅರೆಬಾಸೆ ಅಕಾಡೆಮಿಂದ ನಡ್ಸೊಕು. ಪುತ್ತೂರು ಮತ್ತೆ ಬೆಳ್ತಂಗಡಿಲಿ ಕಾರ್ಯಕ್ರಮ ಹಾಕ್ಯಂಕು.

**ಅರೆಬಾಸೆ ಎಲ್ಲ್ಯಟ್ಟು?।**

ಅರೆಬಾಸೆ ಸುಳ್ಯಂದ ಹೊರಗೆ ಪುತ್ತೂರು, ಬಂಟ್ವಾಳ, ಬೆಳ್ತಂಗಡಿ ತಾಲೂಕು ಇರುವ ಗೌಡ್ರು ಅರೆಬಾಸೆಲಿ ಯಾಕೆ ಮಾತಾಡ್ತುಲೆ?। ಇದ್ಕೆ ಸಂಬಂದಪಟ್ಟ ಚರಿತ್ರೆನ ವಿಚಾರಗ ಯಾವುದು? ಈ ಬಗ್ಗೆ ಅಧ್ಯಯನ ನಡ್ಯೊಕು. ಮೇಲೆಂದ ಮೇಲೆ ಕಾಂಬ ಹಾಂಗೆ ಈ ಪ್ರದೇಶ ತುಳುಬಾಸೆನ ಪ್ರಭಾವಲಿ ಉಟ್ಟು. ತುಳುನಾಡ್‌ಂತ ಸಂಗಮ್ ಸಾಹಿತ್ಯದ (ಕ್ರಿ.ಪೂ 3ನೇ ಶತಮಾನ) ಕಾಲಲೇ ಇಲ್ಲಿ ತುಳುಬಾಸೆ ಮಾತಾಡುವ ಜನ ಇದ್ದೊಂತ ಚರಿತ್ರೆ ಅಧ್ಯಯನಗ ಸೂಚಿಸುವೆ. ಮಧ್ಯಕಾಲ, ತಡ ಮಧ್ಯಕಾಲಲಿ ಜೈನರ್ ಮತ್ತೆ ಬಂಟ್ರ, ಬಿಲ್ಲೊವು, ಮುಗ್ಗರ್, ಮುಗೇರ್‌ಗ ಮಾತಾಡ್ತಾ ಇದ್ದ ಊರುಲಿ ಗೌಡ್ರುಗ ಸೇರಿಕಂಡೊ. ಗೌಡ್ರ ಬಾಸೆ ಕನ್ನಡ ಆಗಿದ್ರೂ ಊರೊಳಗೆ ಅದ್ ನಡ್ತ್‌ಲೆ. ಊರುನ ಬಾಸೆನ ಕಲ್ಯದೆ, ಮಾತಾಡದೆ ಅಲ್ಲಿ ಬದ್ಕಿಕೆ ಸಾಧ್ಯ ಇಲ್ಲೆಂತೇಳ್ವ ಅನಿವಾರ್ಯತೆಲಿ ನಮ್ಮೊವು ತುಳು ಕಲ್ತೊ. ದಿನ ಕಳ್ದ ಹಾಂಗೆ ಕನ್ನಡನ ಮರ್ತೊ.

ಈ ವಿಚಾರ ಸುಳ್ಯ ತಾಲೂಕುನ ಒಳಗೂ ಸತ್ಯ. ಈಗನ ತಾಲೂಕು ಗಡಿವೊಳಗೆ ಎಲ್ಲಾ ಕಡೆ ಅರೆಬಾಸೆ ಇಲ್ಲೆ. ಪುತ್ತೂರು, ಬೆಳ್ತಂಗಡಿ, ತಾಲೂಕುಗಳಿಗೆ ಅಂಟಿಕಂಡಿರುವ ಗ್ರಾಮಗಳ್‌ಲಿ ಸುಳ್ಯ 'ಗೌಡ್ರು' ತುಳುನೇ ಮಾತಾಡ್ದು. ಇನ್ನೊಂದು ರೀತಿಲಿ ಹೇಳ್ದುಂತಾದರೆ ಹಾಸನ ಮತ್ತು ಕೊಡ್ಗಿಗೆ ತಾಗ್ಯಂಡ್ ಇರುವ ಸುಳ್ಯಲಿ ಈ ಅರೆಬಾಸೆ ಬೆಳ್ದುಟು, ಒಳ್ದುಟು. ಆದರೆ ಇಂಗ್ಲಿಷ್ ' ಅರೆಬಾಸೆನ ಕೊಲ್ತಾ ಉಟ್ಟೊಂತ ಹೇಳ್ದು ಸತ್ಯ.

## ಸುಳ್ಯ ಅರೆಬಾಸೆನ ಗಟ್ಟಿ ನೆಲ

ಅರೆಬಾಸೆ ಇಂದ್ ಇರುವ ಊರುನ ಕಟ್ಟಿದೊವು ಗೌಡ್ರೆ. ಕಾಡೊಳಗೆ ಮಲೆಕುಡಿಯೆರ್ ದೂರ ದೂರಲಿ ಕಾಡುತ್ಪತ್ತಿನ ನಂಬಿ ಜೀವನ ಮಾಡ್ತಾ ಇದ್ದೊ. ಇವರ ಹೊರತಾಗಿ ಇಲ್ಲಿ ಬೇರೆ ಜಾತಿಯೊವು ಇತ್ತೆ. ಕರಿಕೆ,ಕಲ್ಲಪಳ್ಳಿ,

ಆಲೆಟ್ಟಿ, ಪೆರಾಜೆ, ತೊಡಿಕಾನ, ಸಂಪಾಜೆ, ಅರಂತೋಡು, ಮರ್ಕಂಜ , ಮಡಪ್ಪಾಡಿ ಕಂದ್ರಪ್ಪಾಡಿ, ದೇವಚಳ್ಳ, ನಾಲ್ಕೂರು, ಹರಿಹರ-ಪಲ್ಲತ್ತಡ್ಕ, ಕೊಲ್ಲಮೊಗ್ರ, ಕಲ್ಮಕ್ಕಾರ್, ಬಾಳುಗೋಡು, ಐನೆಕ್ಕಿ, ಸುಬ್ರಹ್ಮಣ್ಯ ಕಾಡ್‌ಗೆ ಅಂಟಿಕಂಡಿರ್ವ ಊರುಗ. ಈ ಊರುಗಳ್ಲಿ ಹೆಚ್ಚ್ ಸುದ್ದ ಅರೆಬಾಸೆ ಉಟ್ಟು. ಮಲ್ಯಾಳದ ಪ್ರಭಾವ ಮತ್ತೆ ತುಳುನ ಪ್ರಭಾವ ಬಾರೀ ಹಿಂದೆಂದಲೇ ಇತ್ತ್. ಇದಲ್ಲದೆ ತುಳ್‌ನಾಡ್‌ಗೆ ಅಂಟಿಕೊಂಡಿರುವ ಮಂಡೆಕೋಲು, ಜಾಲ್ಸೂರು, ಕನಕಮಜಲು, ಐವರ್ನಾಡ್, ಬೆಳ್ಳಾರೆ, ಪೆರುವಾಜೆ, ಮುರುಳ್ಯ, ಎಣ್ಮೂರು, ಎಡಮಂಗಲ, ಐವತ್ತೊಕ್ಲು, ಕೇನ್ಯ, ಬಳ್ಪ ಗ್ರಾಮಗಳ್ಲಿ ಅರೆ ಗೌಡ್ರು ತುಳುಮಾತಾಡ್ವೆ. ಯೆನೆಕಲ್ಲು, ಗುತ್ತಿಗಾರ್, ಬಂಟಮಲೆನ ಸುತ್ತ ಇರುವ ಆರ್ ಗ್ರಾಮಗ, ನೆಲ್ಲೂರು ಕೆಮ್ರಾಜೆ, ಉಬರಡ್ಕ ಮಿತ್ತೂರು ಸುಳ್ಯಲಿ ಅರೆಬಾಸೆನ ಮೂಲಬಾಸೆ. ಪೆರ್ಜದ ಅರೆಬಾಸೆ, ಏನೆಕಲ್ಲ್‌ನ ಅರೆಬಾಸೆಗಳ ಉಚ್ಚಾರ ಮಾಡ್ದರ್ಲಿ ಮತೆ ಪದಪ್ರಯೋಗ ಮಾಡ್ದರ್ಲಿ ಭಾರೀ ವ್ಯತ್ಯಾಸ ಕಂಡದೆ. ಅರಬಾಸೆನ ಒಳಗೆನೂ ಪದಬಳಕೆಲಿ ಭಿನ್ನತೆ ಉಟ್ಟೂಂತ ಹೇಳ್ದೂ ಸತ್ಯನೇ. ಹಾಂಗೆನೇ ಆಹಾರ ರುಚಿ, ಮಾಡ್ವ ಕ್ರಮಲಿನೂ ಕೂಡಾ ವ್ಯತ್ಯಾಸ ಉಟ್ಟು. ಕೋಳಿ ಗೈಪು, ಹಂದಿಗೈಪು ಮಾಡ್ದರ್ಲಿ ಕೂಡಾ ಭಾರಿ ಭಿನ್ನತೆ ಇದ್ದ ಕಾರಣ ವಿಭಿನ್ನತೆ ರುಚಿನ ಸೊಬಗು ಹೆಚ್ಚಿಸ್ದೆ. ಇನ್ನ್ ಕೊಡ್ಗ್‌ಗೆ ಹೋಲ್ಸಿರೆ ತುಂಬಾ ವ್ಯತ್ಯಾಸಗ ಒಳೊ. ಇದೆ ರೀತಿಲಿ ಉಡುವ ಸೀರೆ, ತೊಡುವ ಬಟ್ಟೆ, ಶೈಲಿ/ಸ್ಟೈಲ್ ಬೇರೆ ಬೇರೆ ಇದ್ದ್, ಸಂಸ್ಕೃತಿನ ಸೌಂದರ್ಯನ ಹೆಚ್ಚಿಸಿದೆ.

ಅರೆಬಾಸೆಗೆ ಒಂದು ಗಟ್ಟಿನೆಲಂತ ಇದ್ದರೆ ನಾವು ಈಗಾಗ್ಲೆ ಗುರ್ತು ಮಾಡ್ದ್ ಕರಿಕೆಂದ - ಸುಬ್ರಹ್ಮಣ್ಯ, ಯೇನೆಕಲ್ಲ್ ವರೆಗೆನ ಸುಮಾರ್ 30 ಗ್ರಾಮಗ. ಇಲ್ಲಿನ ಮಡಪ್ಪಾಡಿ, ಐನೆಕ್ಕಿ, ಕಲ್ಮಕ್ಕರ್, ಹರಿಹರ ಬಾಳುಗೋಡು ನಂತಹ ಗ್ರಾಮಗಳ್ಲಿ ಗೌಡ್ರ ಬುಟ್ರೆ ಉಳ್ದವು ಲೆಕ್ಕಕೆ ಇಲ್ಲೆ. ಈ 30 ಗ್ರಾಮಗ ಅರೆಬಾಸೆನ ಗಟ್ಟಿನೆಲ ಅಥವಾ (Core area) ಕೋರ್ ಏರಿಯಾಂತ ಹೇಳಕ್. ಇದ್ ಮೊಟ್ಟೆ ಒಳಗಿರ್ವ ಅಣ್ಣಣದಾಂಗೆ. ಮೊಡ್ಪಾಡಿ ಗ್ರಾಮಲಿ ಒಂದು ಬಟ್ರ್ ಮತ್ತೆ ಕಾಡೊಳಗೆ ಇರುವ 4 ಮಲೆವರ ಬುಟ್ರೆ ಉಳ್ದೊವು ಪೂರ ಅರೆಬಾಸೆನವೇ. ಹೀಂಗೆ ಐನೆಕ್ಕಿ ಬಾಳುಗೋಡು, ಕಲ್ಮಕ್ಕಾರ್‌ಲಿ ಕೂಡ ಅದೇ ಲಕ್ಷಣ ಕಂಡದೆ. ಅರೆಬಾಸೆನ ಇಂಗ್ಲೀಷ್ ಕೊಂದದೆ.

ಮಲ್ಯಾಳ, ಕೊಡವ ಬಾಸೆನ ಪ್ರಭಾವ ಇರ್ವ ಪ್ರದೇಶಲಿ ಅರೆಬಾಸೆ ಒಳ್ದುಟು. ಆದರೆ ತುಳು ಪ್ರದೇಶಲಿ ಅರೆಬಾಸೆ ಒಳ್ತ್‌ಲೆ. ನಮ್ಮೊವು ತುಳುಬಾಸೆನ ಮನೆ ಬಾಸೆಂತ ಬಳಸ್ತಾ ಬಂದೊಳೊ. ಇಲ್ಲಿಯವರ ಬಳಿ ಬದಲಾತ್ಲೆ. ರೀತಿ ನೀತಿ ಬದಲಾತ್ಲೆ, ದೈವ ದೇವ್ರುಗ, ಸಂಪ್ರದಾಯಗ ಅರೆಬಾಸೆ ಜಗತ್ತ್‌ನ ಒಳಗೆನೇ ಉಟ್ಟು. ಸಣ್ಣ ಪುಟ್ಟ ಬದಲಾವಣೆಗ ಇದ್ದರೂ ಇವು ಅರೆಬಾಸೆ ಗೌಡ್ರ ಸಾಮಾಜಿಕ ಚೌಕಟ್ಟ್‌ನ ಹೊರಗೆ ಇದ್ ಹಾಂಗೆ ಕಾಂಬೊದ್ಲೆ. ಬಾಸೆನ ವಿಚಾರಕೆ ಬಾಕನ ಅರೆಬಾಸೆನ ಗಟ್ಟಿ ನೆಲಲಿ ಗೌಡ್ರಲ್ಲದೆ ಜಾತಿ ಸಮುದಾಯದವರ ಮೇಲೆ ಅರೆಬಾಸೆ ಪ್ರಬಾವ ಬೀರಿಟ್ಟು. ಇಲ್ಲಿರುವ ಬಟ್ರಗ, ಬ್ಯಾರಿಗ, ಇತರೇ ಜಾತಿಗಳಾದ

ಗಾಣಿಗ,(ಪಾಟಾಳಿ) ಮರಾಠಿ ನಾಯ್ಕ, ಮೊಗೇರ, ಬೈರ,ಅಜಿಲ,ಪರವ, ಕೊಂಕಣಿ ಎಲ್ಲಾ ಮನೆ ಮಾತ್ ಮಾತೊಡೊವುನೂ ಅರೆಬಾಸೆ ಮಾತಾಡುವೆ. ಸುಳ್ಯದ ಕೆಲ್ಸಿಕಟ್ಟೆ ಭಾಗಲಿ ಅಂಗಡಿ ಇಸಿಕಂಡ್ ಇರ್ವ ಬ್ಯಾರಿಗ ಅರೆಬಾಸೆ ಮಾತಾಡ್ರೆ ಯಾವ ವ್ಯತ್ಯಾಸನೂ ಗೊತ್ತಾದ್ಲೆ. ಮೊನ್ನೆ ಮೊನ್ನೆ ಗುತ್ತಿಗಾರ್‌ಗೆ ಕೊಟ್ಟಾಯಂದ ಬಂದ ಚೇಟಂಗ ಕೂಡಾ ಬಾರಿ ಲ್ಯಾಕಿಲಿ ಅರೆಬಾಸೆ ಮಾತಾಡ್ವೆ!. ಇದೇ ಕಾರಣಂದಾಗಿ ಸುಳ್ಯ ಅರೆಬಾಸೆನ ಗಟ್ಟಿನೆಲಂತ ಹೇಳಕ್. ಇಲ್ಲಿ ಅರೆಬಾಸೆ ಬೇರ್‍ಯವರ ಮೇಲೆ ಪ್ರಾಭವ ಬೀರಿಟು. ಅರೆಬಾಸೆನೇ ಇಲ್ಲಿ ರಾಜಬಾಸೆ. ಸರಕಾರಿ ಆಫಿಸ್, ಸಾಲೆ, ಕಾಲೇಜ್, ಸಭೆ, ಸಮಾರಂಭಗ ನಡ್ಯಕನ ಅರೆಬಾಸೆಲೇ ಎಲ್ಲೊವು ಅಧಿಕೃತಂತ ಮಾತಾಡ್ವೆ. ಅದ್ ತನ್ನಷ್ಟಕ್ಕೆ ರೂಢಿಗೆ ಬಂದುಟು. ಯಾರ್‍ಯೆ ಈ ಬಗ್ಗೆ ಬಲ್ತಾಕರ ಮಾಡ್ದ್ ಇಲ್ಲೆ. ಆದೆರೆ ಯಾಗ ಇಲ್ಲಿ ಇಂಗ್ಲಿಷ್ ಮೀಡಿಯಂ ಸಾಲೆ ಆತೋ ಅಲ್ಲಿಂದ ಪರಿಸ್ಥಿತಿ ಬದಲಾಕೆ ಸುರಾಗುಟ್ಟು. ಇದೇ ಕಾರಣಂದ ಸುಳ್ಯಲಿ ಅರೆಬಾಸೆ ಅದರ ಗಟ್ಟಿತನ ಕಳ್ಕಂಬಕೆ ಸಾದ್ಯ ಉಟ್ಟು. ಆ ಅಪಾಯನ ನಾವು ಇಂದ್ ಗ್ರಹಿಸಿಕೆ ಸಾಧ್ಯ ಆಗದಿದ್ದರೆ ಮುಂದೆ ಈ ಬಾಸೆ ಸಾಯೊದು ಖಂಡಿತ. ಇಂಗ್ಲೀಷ್ ಅರೆಬಾಸೆನ ಮಾತ್ರ ಅಲ್ಲ ನಮ್ಮ ದೇಶದ ಎಲ್ಲ ಬಾಸೆನೂ ಕೊಲ್ತಾ ಉಟ್ಟು.

## ಅರೆಬಾಸೆಲಿ ಸರ್‍ಯಾದ ಶಬ್ದ ಸಿಕ್ಕುದುಲೆ!

ಈ ಲೇಖನ ಅರೆಬಾಸೆಲಿ ಬರ್‍ಯಕೆ ಸುರು ಮಾಡ್ಕನ ನಂಗೆ ಸುದ್ದ ಅರೆಬಾಸೆನ ಶಬ್ದ ಸಿಕ್ತಾ ಇತ್ಲೆ. ಏನೇ ಬರದ್ರೂ ಇದು ನಮ್ಮ ಸಾಲೆ ಕನ್ನಡಂತ ಅನುಮಾನ ಬಂದದೆ. ಸುದ್ದ ಅರಬಾಸೆ ಶಬ್ದ ಬೇಕೂಂತಾದರೆ ಸಾಲೆಗೆ ಹೋಗದ, ಪೇಟೆ ಗಾಳಿ ಹೊಡ್ಸಿಕಣದ ಕಾಡೊಳಗೆ ಇರ್ವ ಹಳ್ಳಿಗಳಿಗೆ ಹೋಗಿ ಅಲ್ಲಿರ್ವ ಅಜ್ಜಿಕಳ ಬಾಯಿಂದ ಲಾಯ್ಕಿನ ಅರೆಬಾಸೆ ಉದುರ್ದೆ. ಆ ಅರೆಬಾಸೆನ ಪೊರ್ಲೇ ಬೇರೆ. ಈ ಅಜ್ಜಿಕ ಸಾಯಕೆ ಮುಂದೆ ಅರೆಬಾಸೆ ಅಕಾಡೆಮಿ ಕಡೆಂದ ಅರೆಬಾಸೆ(ಶಬ್ದಕೋಶ) ಶಬ್ದಗಳ ದಾಖಲೀಕರಣ ನಡ್ಯಲಿಂತ ಗುರುಕಾರ್ನೊರೊಟ್ಟಿಗೆ ಪ್ರಾರ್ಥನೆ ಮಾಡ್ಕಣೆ. ಅಕಾಡೆಮಿ ರಚನೆ ಆಗಿ ವರ್ಸ ಆದರೂ ತನ್ನ ಕೆಲ್ಸ ಏನ್‌ಂತ ಇನ್ನೂ ತಲೆಗೆ ಹೋದಾಂಗೆ ಕಾಣ್ದುಲೆ.

ಇಂದ್ ಇಂತ ಕಷ್ಟ ತುಳುಬಾಸೆಗೆ ಇಲ್ಲೆ. ತುಳುವ ಒಳ್ಸಿದ್ ನೇಮ ಕೋಲಗ, ಸಂದಿ ಪಾಡ್ದನಗ. ತುಳುಲಿ ಜಾನಪದ ಪದ್ಯಗ ಒಳೊ. ತುಳು ನಾಟಕಗ ತುಳು ಗಡಿಂದ ಹೊರಗೆನೂ ಚಾಲ್ತಿಲಿ ಬಂದೊಳೊ. ಇಂತ ಸ್ವಂತ ಪ್ರಯತ್ನಗ ಅರೆಬಾಸೆಲಿ ನಡ್ಯೊಕು. ಇದ್ಕೆ ಸರಿಯಾದ ಯೋಜನೆ, ದೂರದರ್ಶಿತ್ವ ಬೇಕು. ಕನ್ನಡ ಇಂಗ್ಲಿಷ್ ಓದಿದ ನಾವುಗೆ ಅರೆಬಾಸೆ ಓದ್‌ಕನ ಒಸಿ ಬಂಜ ಆದೆ. ಕನ್ನಡಲಿರ್ವ ಅಂಕೆ ಸಂಖ್ಯೆಗಳ ಓದಿಕೆ ಇನ್ನೂ ರೂಢಿ ಆತ್ಲೆ. ಸಮಯ ತಕಣಲಿ. ಆದ್ರೆ ಗುರಿ ಇರೊಕು. ಅರೆಬಾಸೆಲಿ ಬರ್‍ಯವರೆ ಸಂಖ್ಯೆ ಹೆಚ್ಚಾಕು. ಬರ್ದ್ ಪ್ರಿಂಟಾಗಿ ಓದಿಕೆ ಸಿಕ್ಕೊಕು. ಆಗ ಬಾಸೆನ ಅಗತ್ಯ ಕಂಡದೆ. ಬಾಸೆ ಒಳ್ದದೆ.

## ಚಿಂತನೆ –೨

# ಹೆತ್ತವರ ಋಣ ತೀರ್‌ಸುದು ಹೆಂಗೆ?

ಇಂದ್ ನಾವೆಲ್ಲವು ಇಲ್ಲಿ ಲಾಯಿಕ್ಕಾಗಿ ಇರಿಕ್ಕೆ ನಮ್ಮ ಹೆತ್ತವು ಮುಖ್ಯ ಕಾರಣ. ಒಂದು ಕೂಸು ಹುಟ್ಟಿ ಅದ್ ಬೆಳ್‌ದ್ ಒಂದು ಹಂತಕ್ಕೆ ಬಾಕೆ ಅಪ್ಪ–ಅವ್ವನೇ ಕಾರಣ. ಕಷ್ಟಪಟ್ಟ್ ಒಂಬತ್ತು ತಿಂಗ ಹೊತ್ತ್ ಹೆತ್ತ್, ವಿದ್ಯೆ ಬುದ್ಧಿ ಕೊಟ್ಟ್ ಸಾಕಿ ಸಲ್‌ಗಿದ ನಮ್ಮ ಹೆತ್ತವೇ ನಿಜವಾದ ದೇವುರುಗ.

ಈ ಲೋಕಲಿ ಬೆಲೆ ಬಾಳುವ ಸುಮಾರ್ ವಸ್ತುಗಳ್‌ನ ದುಡ್ಡುಕೊಟ್ಟ್ ತಕಣಕ್ಕ್. ಆದರೆ ಅಪ್ಪ–ಅವ್ವನ ತಕಣಿಕೆ ಸಾಧ್ಯ ಇಲ್ಲೆ. ನಮ್ಮನ ಹೆತ್ತ್ ಒಂದು ಆಕಾರ ಕೊಟ್ಟ್ ಬೆಳ್‌ಸಿ ಹುಟ್ಟಿದಂಗೆ ಸಂಭ್ರಮಪಟ್ಟ್ ಹುಟ್ಟಿದ ಗಳಿಗೆ ನೋಡಿ ಜಾತಕ ಬರ್‌ಸಿ ಪೊರ್ಲುನ ಅರ್ಥಪೂರ್ಣ ಹೆಸ್‌ರ್ ಹಾಕಿ ನಮ್ಮನೆಲ್ಲ ಬೆಳ್‌ಸಿಯೊಳೊ. ಒಬ್ಬ ಶಿಲ್ಪಿ ಒಂದು ಕಲ್ಲ್‌ನ ಕೆತ್ತಿ ಅದ್ಕೆ ರೂಪ ಕೊಟ್ಟ್ ಕೆತ್ತಿದಂಗೆ, ಒಬ್ಬ ಕುಂಬಾರ ಮಣ್ಣ್‌ನ ಮುದ್ದೆನ ತಕ್ಕಂಡ್ ಆಕಾರ ಕೊಟ್ಟ್ ರೂಪ ಬರ್‌ಸುವಂಗೆ ನಮ್ಮ ಹೆತ್ತವು ಮನೆನೇ ಸುರುನ ಪಾಠ ಶಾಲೆತ ಹೇಳುವಂಗೆ ಮನೆಲಿ ಕಲ್‌ಸುವ ವಿದ್ಯೆಕೊಟ್ಟ್ ನಮ್ಮ ಸರಿ–ತಪ್ಪು ಇಂತಹ ತಪ್ಪುನ ಮಾಡಕಾದ್‌ತ ಒಡ್ಡ್, ಬೈದ್ ಒಂದು ಹಂತಕ್ಕೆ ತಂದ್ ಮನೆ ಪಾಠ ಕಲ್‌ಸಿ ಇಸ್ಕೂಲ್‌ಗೆ ಸೇರ್‌ಸಿವೆ. ಅಲ್ಲಿ ಗುರುಗ ನಮ್ಮ ಜೀವನಕ್ಕೆ ಬೇಕಾದ ವಿದ್ಯೆನ ಕೊಟ್ಟ್ ಒಂದು ರೂಪಕೆ ತಂದವೆ.

ಹೆತ್ತವು ನಮ್ಮ ಮಕ್ಕ ಯಾಗೊಳು ಲಾಯಿಕ ಇರ್ಲಿ. ನಾವು ಪಟ್ಟ ಕಷ್ಟನ ಅವು ಪಡ್‌ದು ಬ್ಯಾಡ. ಆದಷ್ಟ್ ಓದಿ ಒಂದು ಚಾಕ್‌ರಿಗೆ ಸೇರ್‌ಲಿ. ಒಳ್ಳ ಹೆಸ್‌ರ್ ತರ್‌ಲಿತ ಆಸೆ ಪಟ್ಟ್‌ಕಂಡ್ ಕೈಲಿದ್ದ ದುಡ್ಡುನ ಎಲ್ಲಾ ವಿದ್ಯೆಗೆ ಹಾಕಿ ಹೊಟ್ಟೆ ಬಾಯಿ ಕಟ್ಟಿಕಂಡ್ ಓದ್‌ಸಿ ಚಾಕ್‌ರಿಗೂ ಸೇರ್‌ಸಿವೆ. ಹೆತ್ತವರ ಆಸೆ ಯಾಗೊಳು ನಮ್ಮ ಮಕ್ಕ ಲಾಯಿಕಾ ಇರ್‌ಲಿ, ಅವೇ ನಮಿಗೆ ಆಸ್ತಿಗತ ಗ್ಯಾನ ಮಾಡಿವೆ.

ಇನ್ನ್ ಮದುವೆ ವಯಿಸ್ಸಿಗೆ ಬಾಕನ ಒಳ್ಳ ಹೈದನ, ಒಳ್ಳ ಗೂಡೆನ ನೋಡಿ ಮದುವೆ ಮಾಡಿವೆ. ನಾವು ಎಂತ ಮಾಡ್‌ರು ಅವರ ಋಣನ ತೀರ್‌ಸಿಕ್ಕೆ ಸಾಧ್ಯ ಆದುಲೆ. ಆದಷ್ಟ್ ಅವರ ಮನಸ್ಸ್‌ನ ನೋಯಿಸದೆ ಅವರ ನೋಡಿಕಣೊಕ್ಕು. ಎಂತರ್ ಅವು ಹೇಳಿರ್ರೆ ತಿರ್‌ಗಿ ಜವಾಬ್ ಕೊಡಕ್ಕದ್. ಅಂತಹ ತಿರ್‌ಗಿ ಹೇಳುವ ಕೆಲ್ಸಕ್ಕೆ ಹೋಕಾದ್ ಅವು ಹೇಳ್‌ದು ನಮ್ಮ ಒಳ್ಳದಕೆತ ತಿಳ್‌ಕೊಣೊಕ್ಕು.

ಮಾತೃದೇವೋಭವ, ಪಿತೃದೇವೋಭವ, ಗುರು ದೇವೋಭವತ ಹೇಳುವಂಗೆ ಇವು ಮೂರು ಜನ ನಮ್ಮ ಪಾಲ್‌ನ ನಿಜವಾದ ದೇವುರುಗ. ಇಂದ್ ನಾವು ನೋಡ್‌ತ್ತಿರ್‌ವಂಗೆ ತುಂಬಾ ಬೇಜಾರದ ವಿಷಯತ ಹೇಳ್‌ರ್ರೆ ಕೆಲವು ಜನ ಮಕ್ಕ ಹೆತ್ತವರ್‌ನ ಕಣ್ಣಿರ್ ಹಾಕ್‌ಸುದು ಜಾಸ್ತಿಯಾಗ್‌ತ ಉಟ್ಟು, ಇದು ಸರಿಯಲ್ಲ. 'ಮಾತಾಪಿತರನ್ನು ಬಳಲಿಸಿದಾತನು ಯಾತ್ರೆಯ ಮಾಡಿದರೇನು ಫಲತ' ಹೇಳುವಂಗೆ ಅಪ್ಪ-ಅವ್ವನ ಸರಿಯಾಗಿ ನೋಡಿಕಣದೆ ಯಾತ್ರೆ, ಪೂಜೆ, ಹೋಮ, ಹವನ ಮಾಡ್ರೆ ಏನು ಪ್ರಯೋಜನ ಇಲ್ಲೆ.

ಎಷ್ಟೆ ಕಷ್ಟ ಇದ್ದರೂ ಅಯ್ಯೋ ನಮ್ಮ ಮಕ್ಕತ ಹೇಳಿಕಂಡ್ ಕೈ ತುತ್ತು ಕೊಟ್ಟ್ ಪ್ರೀತಿ ತೋರ್‌ಸಿ ಆರೋಗ್ಯ ಸರಿಯಿಲ್ಲದಿರ್‌ಕಾನ ಆಸ್ಪತ್ರೆಗೆ ಹೆಗ್ಲ್ ಮ್ಯಾಲೆ ಹಾಕಂಡ್ ಹೋಗಿ ಮೊದ್ದ್ ಕೊಡ್‌ಸಿ ನಮ್ಮ ಬೆಳ್‌ಸಿ ಈ ಹಂತಕ್ಕೆ ತಂದೊಳೊ.

ಇಂದ್ ಕಾಲ ಬದ್‌ಲಾಟ್ಟು, ಪಂಡ್ ಕಾಲಲಿ ಹತ್ತ್ ಮಕ್ಕಳ ಹೆತ್ತವು ಕಷ್ಟಪಟ್ಟ್ ಸಾಕ್‌ತಿದ್ದೊ. ಆದರೆ ಇಂದ್‌ನ ಕಾಲಲ್ಲಿ ಅದೇ ಹೆತ್ತವರ ಹತ್ತ್ ಮಕ್ಕ ಸೇರಿಕಂಡ್ ಸಾಕಿಕೆ ಹಿಂದೆ-ಮುಂದೆ, ನೋಡುವ ಕಾಲ ಬಂದುಟ್ಟು. ಇದ್ ಸರಿಯಲ್ಲ, ವಯಿಸ್ಸಾದ ಕಾಲಲಿ ನಮ್ಮ ಆರೈಕೆಗೆ ಮಕ್ಕ ಇರ್‌ಲಿತ ಅವು ಪಟ್ಟ ಕಷ್ಟನ ನಾವು ಗ್ಯಾನ ಮಾಡಿಕೊಣೂಕು.

ಅರವತ್ತು ವಯಿಸ್ಸ್ ದಾಟಿದ ಮ್ಯಾಲೆ ಅರ್‌ಳೊ ಮರ್‌ಳೊ ಹೇಳುವಂಗೆ ಊರು ಹೋಗು, ಕಾಡ್ ಬಾತ ಕರಿತ ಇದದ್ದೆ. ಇಂದ್ ನಾವು ಅವರ್‌ನ ನೋಯಿಸಿರೆ ನಮಿಗೂ ಒಂದು ಕಾಲ ಉಟ್ಟು, ನಮಿಗೂ ವಯಿಸ್ಸಾಕಾನ ನಮ್ಮ ಮಕ್ಕಳೂ ಹಿಂಗೆ ಮಾಡ್‌ವೋತ ಹೇಳ್‌ದನ ನಾವು ಚಿಂತನೆ ಮಾಡೋಕು. ನಾವು ಹಂಗೆ ಮಾಡಿರೆ ನಮಿಗೂ ಕಟ್ಟಿ ಮಡ್‌ಗಿದ ಬುತ್ತಿ.

ಇಂದ್ ನಾವು ನೋಡುವಂಗೆ ಎಷ್ಟೋ ಕಡೆಗಳ್‌ಲ್ಲಿ ಹೆತ್ತವು ಬೀದಿಗೆ ಬೀಳ್‌ತ ಒಳೊ. ಕಷ್ಟಪಟ್ಟ್ ಮಕ್ಕಳ ಹೊರಗಡೆ ಚಾಕ್‌ರಿಗೆತ ಕಳ್‌ಸಿರೆ ಅವು ಅಲ್ಲಿಯೇ ಮದುವೆ ಆದು. ಇಲ್ಲೆ ಹೆತ್ತವರ ಮಾತ್‌ನ ಮೀರಿ ಮದುವೆ ಆದು ಎಲ್ಲಾ ನಡೀತ ಉಟ್ಟು. ಹೊರಗಡೆ ಚಾಕ್‌ರಿಗೆ ಹೋದವು ಪ್ಯಾಟೆ ಸಂಸ್ಕೃತಿಗೆ ಒಗ್ಗಿ ಹೋಗಿ ಹಳ್ಳಿ ಸಂಸ್ಕೃತಿನ ಮರ್‌ತವೆ. ಇದರ್‌ಂದ ಪದ್ಧತಿ ಸಂಸ್ಕೃತಿ ಸಹ ಕೈ ಬುಟ್ಟು ಹೋದೆ. ನಾವು ಹೇಳ್‌ದೆ ಸರಿತ ನಡ್‌ಕಂಡ್ ಹೆತ್ತವರ ಕಣ್ಣೀರ್ ಹಾಕ್‌ಸಿವೆ. ಅವರ ಸರಿಯಾಗಿ ನೋಡಿಕಣದೆ ಹೇಳ್ದ ಮಾತ್ ಕೇಳದೆ ವೃದ್ಧಾಶ್ರಮಗಳಿಗೂ ಸೇರ್‌ಸುವ ಕಾಲ ಬಂದುಟ್ಟು, ಇದ್ ಸರಿಯಲ್ಲ.

ಪ್ರಕೃತಿ ನಿಯಮದಂಗೆ ಸಣ್ಣದರ್‌ಲ್ಲಿ ಇರ್‌ಕಾನ ನಮಿಗೆ ಅವು ಆಸರೆ ಆಗಿ ಇದ್ದವೆ. ನಾವು ದೊಡ್ಡವಾದ ಮ್ಯಾಲೆ ಅವುಕ್ಕೆ ವಯಿಸ್ಸಾದ ಕಾಲಲ್ಲಿ ನಾವು ಆಸರೆ ಆಗಿ ನಿಲ್ಲೊಕು. ಅವುಕ್ಕೆ ವಯಿಸ್ಸಾದಂಗೆ ನಮ್ಮ ಒಳ್ಳದ್ದನೇ ಅವು ಬಯಿಸಿಕಂಡ್ ಕಾಲ ಕಳಿಯಕ್ಕೆ ನೋಡಿವೆ. ಈ ಲೋಕಲಿ ಎಂತ ಮಾಡ್‌ರು ಹೆತ್ತವರ ಋಣನ ತೀರ್‌ಸಿಕ್ಕೆ ಸಾಧ್ಯ ಆದುಲೆ. ಅವರ ಲಾಯಿಕ್ಕಾಗಿ ಪ್ರೀತಿಂದ ನೋಡಿಕಂಡ್ ಅವರ ಬೇಕು-ಬೇಡಿಕೆಗಳ್‌ನ ಈಡೇರಿಸಿಕಂಡ್ ಹೋಕು. ಅವರ ಸರಿಯಾಗಿ ನೋಡಿಕಣದೆ ಕಣ್ಣೀರ್ ಹಾಕ್‌ಸಿರೆ ಅವು ಹಾಕುವ ಒಂದು ಹನಿ ಕಣ್ಣೀರು ನಮಿಗೆ ನಮ್ಮ ಜೀವನಕ್ಕೆ ಶಾಪ ಆದೆ. ಆ ಶಾಪದಿಂದ ಏಳಿಗೆ ಅದು ಕಷ್ಟನೇ.

ಈ ಲೋಕಲಿ ಏನು ಮಾಡ್‌ರು ಹೆತ್ತವರ, ವಿದ್ಯಕಲ್‌ಸಿದ ಗುರುಗಳ ಋಣನ

ತೀರ್‌ಸುದು ತುಂಬಾ ಕಷ್ಟನೆ. ಇವೇ ನಿಜವಾದ ದೇವುರುಗ. ಅವರ ಆರ್ಶೀವಾದ ನಮ್ಮ ಎಲ್ಲಾವು ಹಿರಿಯವರ್‌ನ, ವಿದ್ಯೆ ಕೊಟ್ಟ ಗುರುಗಳ್‌ನ, ಜನ್ಮಕೊಟ್ಟ ಅಪ್ಪ-ಅವ್ವನ ಗೌರವಿಸನ. ಅವರ ಹೆಸ್‌ರ್ ಕೀರ್ತಿನ ಹಾಳ್ ಮಾಡ್‌ದು ಬ್ಯಾಡ. ಅವುಕ್ಕೆ ಇನ್ನೂ ಒಳ್ಳ ಹೆಸ್‌ರ್ ತರ್‌ನ. ಅವರ ಲಾಯಿಕ್ಕಾಗಿ ನೋಡಿಕಂಡ್ ಅವರ ಆರ್ಶೀವಾದಂದ ಜೀವನಲ್ಲಿ ಮುಂದೆ ಹೋಕೆ ಪ್ರಯತ್ನ ಪಡನೊ.

✍ಉಳುವಾರನ ರೋಶನ್ ವಸಂತ್

ಕಾಂತೂರು ಗ್ರಾಮ
ಮೂರ್ನಾಡ್ ಅಂಚೆ, ಮಡಿಕೇರಿ
ಮೊ : 8861862035

* * * * *

# ಮಣ್ಣ್‌ನ ಮಕ್ಕಳ ಪಾಡ್

ನೋಡಿಲ್ಲಿ ಮಣ್ಣ್‌ನ ಮಕ್ಕಳಾದ ನಮ್ಮ ಪಾಡ್
ಮಳೆಗಾಲಲಿ ಮೈಕೈಲೆಲ್ಲ ಗದ್ದೆ ಕೆಸರ್
ಚಳಿಗಾಲ ಬೇಸಿಗೆಲಿ ಹೊಡಿ ಮಣ್ಣ್ ದೂಳ್
ಆಳವರ ಕಣ್ಣಿಗೆ ನಾವ್ ಅನ್ನದಾತರ್.
        ಬೇಸಾಯದ ಕೆಲ್ಸ ಎಂದೂ ಮುಗಿಯದ ಕೆಲ್ಸ
        ಮಳೆ ಓಡಿಯಕಾಕನ ಎಡೆಬಿಡದ ಕೆಲ್ಸ
        ನೊಗ ನೇಗ್ಲ್ ಜೋಡ್ಸಕು ಎತ್ತ್ ಹುಡುಕಕು
        ಗೆರೆಗಾಡ್ ಕಡ್ದ್ ಮತ್ತೆದರ ಸುಡಕು
ಗದ್ದೆ ಹೂಡುದು, ತೋಡು ತಿದ್ದುದು
ಪುಣಿ ಕಡ್‌ದ್ ಹೊಗುಳು ಒಡಿಯದು
ಬೀಜ ಹಾಕುದು, ನಾಟಿ ನೆಡುದು
ಎತ್ತ್ ಕೊಡುದು, ನಾಟಿಗೆ ಹೋದು
        ಮತ್ತೆ ಕಳೆ ತೆಗಿಯಕು, ನೀರ್ ನೋಡಕು
        ಹೊಗುಳು ಕಟ್ಟಕು, ಒಡ್ದ ಪುಣಿ ಮುಚ್ಚಕು
        ಬೆಳೆ ಬರಗಂಟ ತಪ್ಪುದುಲೆ ತೋಟ ಕೆಲ್ಸ
        ಕಾಡ್‌ಮಣ್ಣ್ ಸುಡು ಮಣ್ಣ್‌ಗಳೊಡನಾಟ

✍ಕುಲ್ಲಚನ ಕಾರ್ಯಪ್ಪ

ಕುಂಬಳದಾಳು ಗ್ರಾಮ,
ಅರ್ವತೊಕ್ಲು ಅಂಚೆ,
ಮಡಿಕೇರಿ-571201.

(ಅನುಭವ – ೧)

# ನನ್ನ "ಮಲ್ಲಿಕಾ"ನ ಸೊಂಟ ಮುರ್ತ್

ನೆನ್ನದೆ ಈ ಬೇಸಿಗೆಗಾಲಲಿ ಮೊನ್ನೆ ಮೊನ್ನೆ ಬಂದ ಎಡೆಬಿಡದ ಮಳೆ ಒಳ್ಳೆ ಆಟಿ ತಿಂಗಳ್ಲಿ ಹೊಡಿವ ಹಾಂಗೆ "ಜೋಂತ" ಜೋಗುಳ ಹಾಡಿಕಂಡು ದಿನ ಇಡೀ ಹೊಡ್ಕಂಡೇ ಇತ್ತ್. ಕತ್ತಲೆಗೆ ಸಾಧಾರಣ 7 ಗಂಟೆ ಮೇಲೆ ಸ್ವಲ್ಪ ಕಡಿಮೆ ಆತ್. ಆದರೂ ಸಣ್ಣಗೆ ಜಿನಿಜಿನಿಂತ ಹನ್ಕ್ತಿತ್ತ್. ನಾನೂ ನನ್ನ ಹೆಣ್ಣ್‌ನು ಟಿವಿಲಿ ಏನೋ ಧಾರವಾಹಿ ನೋಡಿಕಂಡ್ ಇದ್ದೊ. ಕತ್ತಲೆಗೆ ಹೆಚ್ಚಿ ಕಡಿಮೆ ಎಂಟು ಘಂಟೆ ಹೊತ್ತಿಗೆ ಹೊರಗೆ ಏನೋ ಬಿದ್ದ ಶಬ್ದ ಕೇಳ್ತ್ . ಹೊರಗೆ ಹೋಗಿ ನೋಡ್ನೆ ನನ್ನ "ಮಲ್ಲಿಕಾ" ಕೆಳಗೆ ಬಿದ್ದುಟು. ಸರಿ ಹಕ್ಕಲೆ ಹೋಗಿ ನೋಡಿಕನ ಅದರ ಸೊಂಟ ಮುರ್ದಾಂಗೆ ಕಂಡತ್. ಖಂಡಿತ ಇನ್ನ್ ಮುಂದೆ ಅದ್ ಎದ್ರಿಕೆ ಸಾಧ್ಯ ಇಲ್ಲೇಂತ ಮನಸ್ಸ್‌ಗೆ ಆತ್.

ನನ್ನ ಮನ್ಸ್‌ಗೆ ಆಗ ನೆಂಪುಗೆ ಬಂದದ್ ನನ್ನ ಚಡ್ಡಿ ದೋಸ್ತಿ. ಹೆಚ್ಚಾಗಿ ನನ್ನ ಕಷ್ಟ ಸುಖನ ಅವನ ಹಕ್ಕಲೆ ನಾ ಹಂಚಿಕಣ್ತಿದ್ದೆ. ಕೂಡ್ಲೆ ಅವಂಗೆ ಮೊಬೈಲ್‌ಲಿ ನನ್ನ "ಮಲ್ಲಿಕಾ"ನ ಸೊಂಟ ಮುರ್ತ್‌ಂತ ಹೇಳ್ದೆ. ಅವ ಯಾವ ಗ್ಯಾನಲಿ ಇತ್ತೊ ಏನೋ ? ಮಲ್ಲಿಕಾ ಶೆರಾವತ್‌ನ ಸೊಂಟ ಮುರ್ತಾ? ಹೇಂಗೆ ಮುರ್ತ್? ಅವ್ಳ ಫಿಲ್ಮ್ ಶೂಟಿಂಗ್‌ಲಿ ಡ್ಯಾನ್ಸ್ ಮಾಡಿಕಂಡ್ ಇರ್‌ಕನ ಜಾರಿ ಬಿದ್ದ್ ಮುರ್ದೊ? ಯಾವ ರೀತಿನ ಡ್ಯಾನ್ಸ್? ಡಿಸ್ಕೋನೊ, ಕ್ಯಾಬರೆನೊ? ಮೈ ತುಂಬಾ ಬಟ್ಟೆ ಹಾಕಿತ್ತೊ ಅಲ್ಲಾ ಅವಳ ಮಾಮೂಲು"ಟೂ ಪೀಸ್" ಬಟ್ಟೆಲಿ ಇತ್ತೊ? ಅವ್ಳ ಸೊಂಟ ಕುಣ್ಸುವ ರೀತಿ ಎಷ್ಟು ಲಾಯ್ಕ ಇತ್ತ್. ಸೊಂಟನ ಹೇಂಗೆ ಕುಣ್ಸ್ತಿತ್ತು? ಅವಳಿಂದಾಗ ಜವಳಿ ಅಂಗ್ಡಿಯವ್ಕೆ ಬಟ್ಟೆ ವ್ಯಾಪಾರ ಕಡಿಮೆ ಆದರೂನು ಪಡ್ಡೆ ಹುಡುಗರ್‌ಂದ ಹಿಡ್ದು ಅಜ್ಜಂದರವರೆಗೆ ಅವರ ನಿದ್ದೆ ಕೆಡ್ಸುತ್ತಿತ್ತ್ ಅಲ್ಲನಾಂತ ಹೇಳಿ ನಂಗೆ ಮಾತಾಡಿಕೆ ಬುಡದೇ ಪಟ ಪಟಾಂತ ಹತ್ತಾರು ಪ್ರಶ್ನೆನ ಉಸುರು ಬುಡದೇ ಒಂದರ ಹಿಂದೆ ಒಂದು ಕೇಳ್ತಾ ಇತ್ತ್. ಅವ್ಳ ಬಗ್ಗೆ ಬಾರೀ ಬೇಜಾರ್ ಮಾಡ್ತ್. ನಂಗೆ ಅವ್ನ. ಮಾತ್ ಕೇಳಿ ತಲೆ ಕೆಟ್ಟಾಂಗೆ ಆತ್. ನಾ ಹೇಳ್ದೆ "ಮಲ್ಲಿಕಾ" ಯಾರ್? ಅವ ಅದರ "ಮಲ್ಲಿಕಾ ಶೆರಾವತ್"ಗೆ ಹೋಲ್ಸಿಟ್ಟು ಅಲ್ಲಾಂತ ಕೂಡ್ಲೆ ಪೋನ್‌ನ "ಕಟ್" ಮಾಡ್ದೆ.

ಈಗ ನನ್ನ "ಮಲ್ಲಿಕಾ"ನ ವಿಷಯಕ್ಕೆ ಬರೊನೊ. "ಮಲ್ಲಿಕಾ"ಂಗೆ 25 ವರ್ಷ ಪ್ರಾಯ ಆಗಿತ್ತ್. ಆ ಪ್ರಾಯದೊವು ಹೇಂಗೆ ಇರುವೋಂತ ಅಲೋಚನೆ ಮಾಡಿ. ನನ್ನ ಅವ್ವ "ಮಲ್ಲಿಕಾ"ನ ಸಣ್ದರ್‌ಂದಲೇ ಸಾಂಕಿ ಬೆಳ್ಸಿದೊವು. ಮೈ ಕೈ ತುಂಬಿಕೊಂಡು ಅಷ್ಟ್

ಲಾಯ್ಕ್ ಕಾಣ್ತ್ತಿತ್ತು. ದಾರಿಲಿ ಯಾರೇ ಹೋದರೂ ಒಮ್ಮೆ ತಿರ್ಗಿ ನೋಡಿ ಮೆಚ್ಚುಗೆನ ದೃಷ್ಟಿ ಬೀರ್ತಿದ್ದೊ. ಯಾರಾದ್ರೂ ಹೊಸಬರ್ ನನ್ನ ಹಕ್ಕಲೆ ನನ್ನ ಮನೆ ಎಲ್ಲೀಂತ ಕೇಳ್ರೆ, ನೀವು ಇಂತ ರೋಡ್‌ಲಿ ಹೋಗಿ ಎದುರು ಹೋಕನನೇ ನನ್ನ "ಮಲ್ಲಿಕಾ" ಕಂಡದೆ ಅದೇ ನಮ್ಮ ಮನೇಂತ ಗುರ್ತ್ ಹೇಳ್ತ್ತಿದ್ದೆ.

ಹಣ್ಣುಗಳ ರಾಜ "ಮ್ಯಾನ" (ಮಾವಿನ)ಹಣ್ಣ್‌ಂತ ಹೇಳ್ವೆ ಅದರ್ಲೂ "ಮಲ್ಲಿಕಾ" ಮ್ಯಾನ ಹಣ್ಣ್ ಅತ್ಯಂತ ರುಚಿಕರವಾದ ಹಣ್ಣ್‌ಂತ ಹೇಳ್ವೆ, ಅದರ ಗೊರಂಟಂತೂ ನಾಲಗೆನಷ್ಟ್ ತೆಳು. ಅದರ ಅನುಭವ ನಮ್ಮ ಮನೆಯವ್ಕೆ ಅಲ್ಲದೇ ಮ್ಯಾನ ಮರಂದ ಹಣ್ಣ್ ತಿಂದ ನನ್ನ ಸಂಬಂಧಿಕರ್, ದೋಸ್ತಿಗ ಮಣಿಪಾಲಂದ ದಿಲ್ಲಿವರೆಗೆ ಅದರ ರುಚಿ ಬಗ್ಗೆ ಹೊಗ್‌ಳಿಯೊಳೊ. ನಾ ನನ್ನ ಕೆಲಸದ ನಿಮಿತ್ತ ಬೇರೆ ಬೇರೆ ಊರ್‌ಗೆ ವರ್ಗಾವಣೆ ಆಗಿ ಹೋಗ್‌ತ್ತಿದ್ದೆ. 25 ವರ್ಷದ ಒಂದೆ ನನ್ನ ತಮ್ಮ ಈ ಮಲ್ಲಿಕಾ ಮಾವಿನ ಮರದ ಗಿಡನ ಬೆಂಗಳೂರ್‌ನ ತೋಟಗಾರಿಕೆ ಇಲಾಖೆಂದ ತಂದ್ ನೆಟ್ಟಿತ್ತ್. ಮರ ಬೆಳ್ದ್‌ಕಂಡ್ ಹೋದಾಂಗೆ ವಿಶಾಲವಾಗಿ ಹರಡ್ತ್ . ಎಷ್ಟೊ ತರದ ಹಕ್ಕಿಗಳಿಗೆ ವಾಸಸ್ಥಾನ ಆತ್. ವಿಶಾಲವಾಗಿ ಹರಡ್ದ ಗೆಲ್ಲ್‌ಂದ ನೆರೆಮನೆಯವ್ಕೆ ತೊಂದ್ರೆ ಆಗಿ ಅನಿವಾರ್ಯವಾಗಿ ಗೆಲ್ಲ್ ಕಡಿಯಕಾತ್. ಏನೇ ಆದರೂ ಬೊಳ್ಪುಗೆ ಐದು ಘಂಟೆಗೆ ಮೊದಲೇ ಮಾವಿನ ಮರಲಿ ಇರುವ ಹಕ್ಕಿಗಳ ಚಿಲಿಪಿಲಿ ರಾಗಂದ ನಂಗೆ ಎಚ್ಚರ ಆಗ್‌ತ್ತಿತ್ತು. ನಿಜಕ್ಕೂ ಬೆಳ್ಗ್ಗನೆ ನಿದ್ದೆ ಹಾಳಾದ್ರೂ ಸಹಾ ಆ ಚಿಲಿಪಿಲಿ ರಾಗದ ಆನಂದ ಇನ್ನು ಮುಂದೆ ಆಕೆ, ಕೇಳಿಕೆ ಸಾಧ್ಯನೇ ಇಲ್ಲೆ. ಮ್ಯಾನ ಮಿಡಿ ಬುಡಿಕನ ಶಾಲೆಗೆ ಹೋಗ್‌ವ ಮಕ್ಕ ಹೊಡಿವ ಕಲ್ಲ್ ಎಲ್ಲಿ ಮನೆನ ಕಿಟಕಿಗೆ ತಾಂಗಿ ಅದರ ಕನ್ನಡಿ ಒಡ್ದು ಹೋದೆನೋಂತ ಮನ್ಸ್‌ಲಿ ಆತಂಕ. ಮದ್ಯಾಹ್ನದ ಹೊತ್ತ್‌ಲಿ ಯಾರೂ ಇಲ್ಲದಿರ್‌ಕನ ಮಕ್ಕ ಅವರ ತುಂಟತನದಿಂದ ಮರಕ್ಕೆ ಹತ್ತಿ ಬಿದ್ದ್ ಕೈಕಾಲು ಮುರ್ಕಂಡ್ರೇಂತ ಆಗುವ ಹೆದ್ರಿಕೆ, ಮನೆ ಟೇರೆಸ್‌ನ ಮೇಲೆ ಹರಡಿದ ಗೆಲ್ಲ್‌ಗಳ ನೆರಳ್‌ಂದ ಎಂತಹಾ ಬೇಸ್ಗೆಲಿನೂ ಸಹಾ ತಂಪಾಗಿ ಇರ್ವ ಮನೆಯ ವಾತಾವರಣ, ಮ್ಯಾನ ಕ್ಯಾ ಹಣ್ಣಾಕನ "ಕಕ್ಕೆ"ಗ ಮ್ಯಾನ ಹಣ್ಣಿಗೆ"ಕುಡ್ಪಿ" ಕಾ..ಕಾ...ಂತ ಹಾಡಿಕೊಂಡು ಅದರ ಬಂಧು ಬಳಗನ ಕರಿವ ರೀತಿ ಎಲ್ಲಾ ಈಗ ನೆಂಪು ಮಾತ್ರ, ಒಂದು ಮ್ಯಾನ ಮರ ಎಷ್ಟು ವಿಧಲಿ ಪ್ರಾಣಿ, ಪಕ್ಷಿಗಳಿಗೆ, ಮನುಷ್ಯರಿಗೆ ಪ್ರಯೋಜನಕಾರಿಯಾದೆ. ನನ್ನ ಮನೆ ಹಕ್ಕಲೇ ಇರುವ ಚೆನ್ನಕೇಶವ ದೇವಸ್ಥಾನಲಿ ಆಗುವ ವಿಶೇಷ ಪೂಜೆಗಳಿಗೆ, ಸುಳ್ಯ ಜಾತ್ರೆ ಸಮಯಲಿ ಈ ಮರದ ಎಲೆ ತಕಂಡ್ ಹೋಗ್ತಿದ್ದೊ. ಬೇರೆವು ಸಹಾ ಅವರ ಮನೆನ ಶುಭ ಕಾರ್ಯಗಳಿಗೆ ಇದರ ಎಲೆನ ತಕ್ಕಂಡ್ ಹೋಗ್ತಿದ್ದೊ. "ಮಲ್ಲಿಕಾ" ಮ್ಯಾನ ಮರದ ಎಲೆ ಉದ್ದ ಮತ್ತೆ ಅಗಲ ಇರ್ವ ಕಾರಣ ತೋರಣ ಕಟ್ಟಿಕೆ ಬಹಳ ಲಾಯ್ಕ ಆದೆ.

ಎರಡು ವರ್ಷಕ್ಕೆ ಒಮ್ಮೆ ಜಾಸ್ತಿ ಫಲ ಕೊಡ್ತಿದ್ದ ಈ ಮರ ಈ ಸತಿ ತುಂಬಾ ಕಾಯಿ ಬುಟ್ಟಿತ್ತ್. ಮರಲಿ ತುಂಬಿದ ಎಲೆಗಳ ಗೊಂಚಲ್‌ಂದ ನಂಗೆ ಅದರ್‌ಲ್ಲಿ ಅಷ್ಟು ಕಾಯಿ ಉಟ್ಟೊಂತ ಗೊತ್ತೆ ಆತಿಲ್ಲೆ. ನಾ ಈ ಲೇಖನದ ಸುರೂಲಿ ಬರ್ದ ಹಾಂಗೆ ಅಕಾಲವಾಗಿ ಬಂದ ಮಳೆನ ನೀರ್ ಎಲೆಗಳ ಗೊಂಚಲ್‌ಲಿ ಸೇರಿಕಂಡ್ ಅದರ ಭಾರ, ಕಾಯಿನ ಭಾರ ಎಲ್ಲಾ ಒಟ್ಟ್ ಸೇರಿ ಭಾರ ತಡ್ಕಂಬಕೆ ಆಗದೆ ಮರ ಮಧ್ಯಂದಲೇ

ಸೊಂಟ ಮುರ್ದ್ ಹಾಂಗೇ ನೆಲಕ್ಕೆ ಒರಗಿತ್ತ್. ಈ ಸಂದರ್ಭಲಿ ನಮ್ಮ ಮನೆನ ಬಲಕ್ಕೆ ಇರುವ ನೆರೆಮನೆವ್ ಈ ಕತ್ತಲೆಗೆ ಬಂದ್ ಮರನ ಕೆಲವು ಗೆಲ್ಲ್‌ಗಳ ಕಡ್ದು ಅದರ ಒಂದು ಕರೆ ಮಾಡಿಕೆ ಮಾಡ್ದ ಸಹಾಯನ ನಾ ಇಲ್ಲಿ ನೆನ್ಸಿ ಕಂಡನೆ.

ಸಂಬಂಧ ಅಥವಾ ಪ್ರೀತಿಂತ ಹೇಳ್ದ್ ಮನುಷ್ಯ ಮನುಷ್ಯರ ನಡುವೆ ಅಥವಾ ಮನುಷ್ಯ ಮತ್ತು ಪ್ರಾಣಿಗಳ ನಡುವೆ ಇರೊಕುಂತ ಇಲ್ಲೆ. ಜೀವ ಇಲ್ಲದ ಮಾತು ಬರದ ಒಂದು ಮರ ನಮ್ಮ ಜಾಲ್‌ಲಿ (ಅಂಗಳಲಿ) ಇರಿಕನ ದಿನಾ ಬೆಳಿಗ್ಗೆ ಎದ್ದ್ ಅದರ ನೋಡಿಕನ, ಅದರ ಮುಂದೇನೆ ಓಡಾಡಿಕಂಡ್ ಇರಿಕನ ನಾವುಗೆ ಗೊತ್ತಿಲದೇ ಅದರ ಮೇಲೆ ಒಂದು ಬಹಳ ಹಕ್ಕಲೆನ ಸಂಬಂಧ ಬೆಳ್ದದೇಂತ ಖಂಡಿತಾ ಹೇಳಕು.

ಮುಂದೆ ಮರನ ಗೆಲ್ಲು ಕಡ್ದು ಮರನ ಪೂರ ಕಡಿಯೋಕುಂತ ನಿಘಂಟು ಮಾಡಿಕಂಡ್ ಮರನ ಕಡಿಯಕನ ಇನ್ನು ಮುಂದೆ ನನ್ನ "ಮಲ್ಲಿಕಾ" ನನ್ನ ಪಾಲಿಗೆ ಇಲ್ಲೇಂತ ಗ್ರಹಿಸಿಕನ ಆ ಸಣ್ಣ ಹನಿ ಮಳೆಲಿ ನನ್ನ ಕಣ್ಣ್‌ಂದ ಜಿನುಗಿದ ಕಣ್ಣೀರ್ ಉಳ್ದವ್‌ಕೆ ಗೊತ್ತಾಗದ ಹಾಂಗೆ ಒರ್ಸಿ ಕಂಡೆ. ನನ್ನ "ಮಲ್ಲಿಕಾ" ಈಗ ನನ್ನ ಪಾಲಿಗೆ ಒಂದು "ಸವಿ ನೆಂಪು" ಮಾತ್ರ.

✍ಹೂವಯ್ಯ ಸುಂತೋಡು

**"ಮರ, ಅದೊಂದು ವರ!"**

* * * * *

# ನುಡಿಮುತ್ತುಗ

1. ಆಗದಿದ್ದರೆ ಆದುಲೆತ ಹೇಳ್
2. ಹಾರುವ ಹಕ್ಕಿ ನೋಡಿಕೆ ಪೊರ್ಲು
3. ಓಡಂಂವನ ದೃಷ್ಟಿ ದೂರ
4. ಆದೋ ಹೋದೋ ಆಕಿಲೆ ಹೋಕಿಲೆ.... ಆ ಭಾವನೆ ಬೇಡ
5. ನೀರಿಗೆ ಇಳ್ದ ಮೇಲೆ ಆಳ ಗೊತ್ತಾದು-ಇದ್ ಹಳೆ ಮಾತ್
6. ಇಳಿಜಾರ್ ಕಡೆ ನೀರ್ ಹರಿಯೊದೇ ನಿಯಮ
7. ಒಂಟಿ ಕೊಳ್ಳಿ ಹೊತ್ತುದು ಕಷ್ಟ
8. ಅಡಂಜ್ಯ ದಿಢೀರ್ ಉಪ್ಪಿನ ಕಾಯಿ!
9. ಉಪಕಾರ ಮಾಡ್ದರ ಹೇಳಿಕಂಡೇ ಇರ್ಬೇಡ
10. ಕೊಂಡಾಟ ಮಾಡಿರೆ ಬಂಡಾಟ ಆದು
11. ಬಾಳೆ ಎಲೆಲಿ ಉಂಬೊದು ಕಮ್ಮಿ ಆಗ್ತಾ ಉಟ್ಟು.
12. ಟಿ.ವಿ. ಬಾತ್, ಮೊಬೈಲ್ ಬಾತ್, ಮಕ್ಕಳ ನಿದ್ದೆ ದೂರ ಹೋತ್.
13. ಉಪಕಾರನ ಮರೆಕಾಗದ್
14. ಗ್ಯಾಸ್ ಒಲೆ ಬಾತ್ ಬೆಸಗೆ ಹೋತ್
15. ಅಟ್ಟ ಇರುವ ಮನೆ ಎಲ್ಲ್ಯುಟ್ಟು? – ಸಂ.

(ಅನುಭವ - ೨)

# ಕತೆ ಕಿತಾಪತಿ

ಮದ್ವೆಂತ ಹೇಳ್ರೆ ಎಲ್ಲರ ಮನ್ಸ್‌ಲಿಸ ನೆಂಪುಗಳ ಜಾತ್ರೆನೆ ತುಂಬಿಕಂಡ್ ಬಂದದೆ. ಅವರವರ ಮದ್ವೆನ ಖುಸಿಗ ಅಷ್ಟೆಷ್ಟೆ ಲಾಯ್ಕದ ನೆಂಪುಗ ಆಗಿದ್ದರೆ, ಉಳ್ದವರ ಮದ್ವೆನ ನೆಂಪುಗಳ್ಲಿ ನಾವುಗೆ, ಕಿತಾಪತಿಗಳ ಮಾಡ್ದ್‌ಸ ಇದ್ದದೆ. ತುಂಬಾ ಜನ ನೆಂಟ್ರ್‌ಗ ಸೇರಿಕಾನ ಕಿತಾಪತಿಗಳ ಮಾಡಿಕೆ ಮೊದ್ವೆಗಳ್ಲಿನೆ ಲಾಯ್ಕ. ಈಗ ಯಾರ ಮನೆಲಿಸ ಬೊಳ್ಪುಗೆ ಯಾವ್‌ದಾದ್ರ್ ಮೊದ್ವೆಗೆ ಹೊರ್ಡಿಕಾನ ಕೇಳ್ವ ಮಾತ್‌ಂತ ಹೇಳ್ರೆ, 'ಮದ್ವೆಗೆ ಕವರ್ ಕಟ್ಟಿಕೆ ಉಟ್ಟಾ ನೋಡ್ನೆ' ಇದ್ ಮಾಮೂಲಾಗಿಟ್ಟು. ಸುಳ್ಯದ ಪುಡೆ ಮದ್ವೆಗಳ್ಲಿ ಆಶೀರ್ವಾದನೆ ಉಡುಗೊರೆ ಈಗ ಜಾಸ್ತಿ ಆಗಿಟು. ಆದರೆ ಕೆಲವ್ ಕಡೆ ದುಡ್ಡು ಕಟ್ಟುವ ಪರಂಪರೆನ ಹಂಗೆ ಉಳ್ಸಿಕಂಡ್ ಬಂದೊಳ. ಒಂದು ಮನೆಂದ ಎಲ್ಲವು ಪೂಜಿ ಬಂದರುಸ ದುಡ್ಡು ಕಟ್ಟುವ ಪದ್ಧತಿ ಇಲ್ಲಿಟ್ಟು. ಕನ್ನಡ ಜಿಲ್ಲೆಲಿ ಒಂದು ಮನೆಂದ ಒಂದೇ ಕವರ್ ಹಾಕುದು. ನಾ ಹೇಳಿಕೆ ಹೊರ್ಟ ವಿಷಯಂತ ಹೇಳ್ರೆ ಈ ಕವರ್ ಕಟ್ಟುವ ವಿಚಾರಲಿ ಜನಗಳಿಗೆ ಮಾಡಿಹೋಗುವ ಎಡವಟ್ಟ್‌ಗ ಒಂದೆರಡಲ್ಲ.

ಎಡವಟ್ಟ್ ಮಾಡಿಕಣದ ಮೊನ್ನನೇ ಇಲ್ಲೆಂತ ಹೇಳಕ್. ಇದರ ಓದಿಕಾನ ನಿಮ್ಮ ನಿಮ್ಮ ಎಡವಟ್ಟ್‌ಗ, ಕಿತಾಪತಿಗ ನೆಂಪಾಗಿ ಮನ್ಸೊಳಗೆ ನೆಗೆ ಬಾರದೆ ಇರಿಕಿಲೆ. ಏನಾರ್ ಕಿತಾಪತಿ ಆಕನ ಆ ಸಮಯಲಿ ನಾಚಿಕೆ, ಹೆದ್ರಿಕೆ ಅವಮಾನ ಆದರುಸ, ಈ ಸಮಯಲಿ ಇಂದೊಂದು ಹಾಸ್ಯ ಆಗಿದ್ದದೆ. ಇಂಥ ಖುಷಿನ ನೆಂಪುಗಳೆ ಮೊನ್ನನ ಕೊನೆವರೆಗೆ ಸ ಕಾದ್‌ಕಂಡಿದ್ದದೆ. ಮೊನ್ನೆ ಮೊನ್ನೆ ನನ್ನವ್ವ ಹೇಳ್ದ ಕಿತಾಪತಿನ ಕತೆ ಕೇಳಿ ಒಮ್ಮೆ ಮಂಡೆಬಿಸಿಯಾದರುಸ ಮತ್ತೆ ಭಾರಿನೆಗೆ ಬಾತ್. ಎಂಬತ್ತರ ಇಸ್ವಿಗಳ್ಲಿ ಮೊದ್ವೆ ಕವರ್‌ಗೆ ಎರ್ಡ್, ಐದ್, ಹೆಚ್ಚ್‌ಂತ ಹೇಳ್ರೆ ಹತ್ತ್. ಭಾರಿ ಹೆಚ್ಚ್‌ಂತ ಹೇಳ್ರೆ ಹದಿನೈದ್ ರೂಪಾಯಿ ಹಾಕುದು ಮಾಮೂಲಿತ್ತ್. ಆದರೆ ಅವ್ವ ತಪ್ಪಿ ನೂರ್ ರೂಪಾಯಿ ಹಾಕಿ ದೊಡ್ಡ ಎಡವಟ್ಟ್ ಮಾಡಿಕಂಡಿದ್ದೊಗಡ! ಮೊದ್ವೆ ಮುಗ್ಸಿ ಮನೆಗೆ ಬಂದ್ ನೋಡಿಕನ ಈ ವಿಸ್ಯ ಗೊತ್ತಾದ್‌ಗಡ. ಅಂದ್‌ನ ಅವರ ತಲೆಬಿಸಿ ಇಂದ್ ಅವರ ವಿಷಾದ ನೆಗೆಲಿ ಕಂಡ್ ಬಾತ್ ನಂಗೆ.

ನನ್ನ ತಮ್ಮನ ಮೊದ್ವೆಲಿ ತಪ್ಪಿ ಖಾಲಿ ಕವರ್ ನೀಡ್ದ್ ಮೊನ್ಸ,

ಮದ್ವೆ ಕಳ್ದ ಎರ್ಡ್ ದಿನದ ಮೇಲೆ ಬಂದ್ ದುಡ್ಡ್ ತುಂಬಿದ ಕವರ್ ಕೊಟ್ಟು ತಪ್ಪಿ ಸಣ ಕಿತಾಪತಿ ಆಗಿಟು. ಮೊನ್ನೆ ಎಡ್ರಸ್ ಬರ್ದು ಖಾಲಿ ಕವರ್ ಕೊಟ್ಟದ್. ದುಡ್ಡು ತುಂಬಿದ ಕವರ್ ನನ್ನ ಕಿಸೆಲಿನೆ ಮಕಾಡೆ ಮಲ್ಗಿತ್ತ್ ಅಂತ ಹೇಳಿ ಕೊಟ್ಟ್ ಹೋದೋ! ನಂಗೆ ಅವರ ನೋಡಿ ಪಾಪ ಒಳ್ಳೆ ಮನ್ಸ್‌ನ ಮೊನ್ಸಂತ್ಲೆ ಆತ್. ಹಿಂಗೆ ಮತ್ತೆ ವಿಸ್ಯ ಗೊತ್ತಾದರೆ ಹೋಗಿ ಹೇಳಕ್. ಆದರೆ ಕೆಲವ್ಕೆ ಪಾಪ ಫಜೀತಿ ಆದ ವಿಸ್ಯನೆ ಗೊತ್ತಾಲ್ಲೆ.

ನನ್ನ ಗೆಳತಿನ ಮೊದ್ವೆಲಿ ಆಶೀರ್ವಾದನೆ ಉಡುಗೊರೆಂತ ಮುಂದೆನೆ ಅಚ್ಚ್ ಹಾಕ್ಸಿದೊ. ಅವಳ ಹತ್ರದ ನೆಂಟ್ರ್‌ಗೊಬ್ಬರ್ ಪಚಾರಕ್ಕೆ ನಿಲ್ಸಿದಲ್ಲಿಯೆ ಅವ್ಳಿಗೆ ಉಡುಗೊರೆ ಕೊಟ್ಟೊ. ನಾನ್ ಕಣ್ಣಾರೆ ನೋಡಿಕಂಡ್ ಇದ್ದೆ. ನನ್ನ ಹಂಗೆ ನೋಡಿಕಂಡ್ ಇದ್ದ ಬೇರೆಯವ್ಕೆ, ತಾವುಸ ಏನ್ ಕೊಡದೆ ಇರ್ದು ಇರ್ಸುಮುರ್ಸಾಗಿ, ಕಿಸೆ ಚೀಲಾಂತ ಎಲ್ಲ ಕಡೆ ಪುರ್ಡಿ ಪುರ್ಡಿ ಇದ್ದ ಬದ್ದ ಕವರ್ ಹುಡ್ಕಿ ದುಡ್ಡು ಕಟ್ಟಿಕೆ ಸುರುಮಾಡ್ದೊ. ಇಡೀ ಮೊದ್ವೆಗೆ ಬಂದ ಜನಕ್ಕೆ ಇದೊಂದು ದೊಡ್ಡ ಫಜೀತಿನ ವಿಸ್ಯ ಆತ್. ಮತ್ತೆ ಎಲ್ಲವುಕೆ ಕವರ್‌ಗೆ ಪುರ್ಡಿ ಪುರ್ಡಿ ದುಡ್ಡು ಹಾಕುದರ್ಲಿ ಬೊಚ್ಚಿ ಹೋತ್! ಬರಿ ಕವರ್ ಸಿಕ್ಕಿರೆ ಸಾಕಾ? ಹೆಸ್ರ್ ಬರಿಯಕೆ ಪೆನ್ನ್ ಕೇಳ್ವ ಅವಸ್ಥೆ ನೋಡಿ ನಾನಂತು ತಲೆ ತಿರ್ಗಿ ಬೀಳಿಕೆ ಬಾಕಿ!

ಮೊನ್ನೆ ಮೊನ್ನೆ ನಾನೊಂದು ಮದ್ವೆಲಿ, ಪಚಾರಕೆ ಹೋಗಿ ಅಭಿನಂದಿಸಿ, ಉಂಬಕೆ ಹೋಕನ ಕವರ್ ನನ್ನ ಕೈಲಿಯೆ ಬಾಕಿ ಆದ್ ಗೊತ್ತಾತ್. ಗಂಡ ಕೂಸುನ ಎತ್ತಿಕಂಡ್ ಕವರ್‌ನ ನನ್ನ ಕೈಲಿ ಕಟ್ಟ್‌ಂತ ಹೇಳಿ ಕೊಟ್ಟಿದೊ. ಇನ್ನ್ ಅವ್ಕೆ ಹೇಳ್ರೆ ಬೈಯ್ಗಳ ಯಾರ್ ತಿಂಬೊದುಂತ ವಾಪಾಸ್ ಸೀದ ಅಲ್ಲಿಗೆ ಹೋದೆ. ಹೈದನ ಅಪ್ಪನತ್ರನೆ ಹೋಗಿ, ಕ್ಷಮಿಸಿ ಅಲ್ಲಿ ಕೊಡಿಕೆ ಮರ್ತ್ ಹೋತ್, ನೀವೆ ತಕಣಿಂತ ಹೇಳಿ ಅವರ ಕೈಲಿ ಕೊಟ್ಟ್ ಬಂದೆ. ಹಿಂಗೆ ಅಲ್ಲಿನೆ ಗೊತ್ತಾರೆ ಪರವಾಗಿಲ್ಲೆ. ಬೇರೆಯವರತ್ರ ಕೊಟ್ಟ್‌ದ್ ಕೊಡಿಕೆ ಹೇಳಕ್. ಆದರೆ ಮನೆಗೆ ಬಂದ ಮೇಲೆ ಕೊಡದೆ ಇದ್ದದ್ ಗೊತ್ತಾದರೆ ಏನ್ ಮಾಡಿಕೆ ಆದ್ಲೆ. ನಂಗೆ ಗೊತ್ತಿದ್ದಂಗೆ ಸುಮಾರ್ ಜನಂಗ ಕವರ್ ಕೊಡುವ ಪರಿಪಾಠನೆ ಇಸಿಕಣ್ತ್‌ಲೆ. ನಾವು ತಕಂಬದು ಬೇಡ, ತಕಣವ್ಕೆ ಕೊಡ್ಡುಸ ಬೇಡಾಂತ ಅವರ ಅಭಿಪ್ರಾಯ. ನನ್ನ ಗುರುಗ ಒಬ್ಬರ್ ಇದ್ದೊ. ಅವು ಕವರ್ ತಕಣಂವ ವಿಸ್ಯನ ಭಾರಿ ಭಾರಿ ವಿರೋಧಿಸ್ತಿದ್ದೊ. ದುಡ್ಡ್ ತಕಂಡ್ ಮೊದ್ವೆಲಿ ಊಟ ಕೊಡಕಾಂತ ಅವರ ಅಭಿಮತ. ಮೊದ್ವೆ ಖುಷಿಲಿ ಎಲ್ಲವುಕೆ ಊಟ ಹಾಕ್ಸುದು ಬುಟ್ಟು ಕವರ್ ಎಂತಕೆ. ಉಡುಗೊರೆ ಕೊಡಿಕೆ ಮನ್ಸಿದ್ದ ಆತ್ಮೀಯರ್ ಕೊಟ್ಟ್‌ಕಂಡವೆ ಅಂತ ಅವು ಹೇಳ್ತಿದ್ದೊ.

ಬರಿ ಕವರ್‌ಗೆ ಸಂಬಂಧಪಟ್ಟಂಗೆ ಇಷ್ಟ್ ನಂಗೆ ಗೊತ್ತಿದಂಗೆ ಇರಿಕಾನ ನಿಮ್ಮ ನಿಮ್ಮ ಕಿತಾಪತಿಗ ಇನ್ನ್ ಲಾಯ್ಕ ಇರ್ದು. ಇನ್ನ್ ಮದ್ವೆಗೆ ಸಂಬಂಧಪಟ್ಟಂಗೆ ಆದ ಎಡವಟ್ಟುಗಳ ಹಂಞ ಹೇಳ್ನೆ. ನನ್ನದೆ ಮೊದ್ವೆನ ಕಾಗದ ಕೊಡಿಕೆ ಸುರು ಮಾಡಿಕಾನ ಎಲ್ಲ ಕಾಗದದೊಳಗೆ ತೆಗ್ದ್ ಅಚ್ಚಾದ್ ಸರಿ ಉಟ್ಟುಂತ ನೋಡಿಕೆ ಹೋತ್ಲೆ. ಸೀದಾ ಕೊಡಿಕೆನೆ ಸುರು ಮಾಡ್ದೊ. ಕಿತಾಪತಿ ಆದ್ ಇಲ್ಲಿನೆ. ನಮ್ಮೂರ್ಲಿಯೆ ಒಂದು ಮನೆಗೆ ಅಚ್ಚಾಗದ ಖಾಲಿ ಕಾಗದ ಸಿಕ್ಕಿತ್‌ಗಡ. ಮೊದ್ವೆಗೆ ಬಂದ ಅವು ಅಮ್ಮನೊಟ್ಟಿಗೆ ಈ ವಿಷ್ಯ

ಹೇಳ್ದಗಡ. ಅಮ್ಮಂಗೆ ಒಮ್ಮೆಗೆ ನಾಚಿಕೆ ಆಗಿ ಕ್ಷಮೆ ಕೇಳ್ಯೊಳೊ. ಈಗ ಅವರ ನೆನ್ಸಿರೆ ಮಾತ್ರ ಅವ್ಕೆ ನೆಗೆ ಬಂದದೆ. ಇನ್ನ್ ಖಾಲಿ ಕಾಗದ ಸಿಕ್ಕಿ ನಮ್ಮೊಟ್ಟಿಗೆ ಹೇಳದೆ ನಾವುಗೆ ಬೈಯ್ಕಂಡವು ಒಳನ ಗೊತ್ತ್‌ಲೆ!

ಇತ್ತೀಚೆಗಿನ ದಿನಗಳ್ಲಿ ಮದುಮಗಳ ಹಂಗೆ ಸಿಂಗರಿಸಿಕಂಡಂಗೆ ಹೊರ್ಡುವವರ ಸಂಖ್ಯೆ ಜಾಸ್ತಿ ಆಕಂಡ್ ಉಟ್ಟು. ಗೂಡೆನ ತಂಗೆಕ್ಕ, ಗೆಳತಿಗ ಹಿಂಗೆ ಯಾರ್ ಮದ್‌ಮಗಳ್‌ಂತ ಗೊತ್ತೇ ಆದ್ಲೆ. ಹಿಂಗೆ ನನ್ನ ಇನ್ನೊಂದು ಗೆಳತಿ ಅವಳ ಅಕ್ಕನ ಮೊದ್ವೆಲಿ ಅವಳಂಗೆ ಲಾಯ್ಕ ಹೊರ್ಟ್‌ಕಂಡ್ ಪಟ್ಟ ನಾಚಿಕೆ ಅಷ್ಟಿಷ್ಟಲ್ಲ. ಹೈದನ ಕಡೆವು ಸೇರ್ದಂಗೆ ಬೇರೆ ಜನಗೆಲ್ಲ ಇವಳೆ ಮದ್‌ಮಗಳ್‌ಂತ ಬಂದ್ ನೋಡಿ ನೋಡಿ ಹೋಗ್ತಿದ್ದೊ. ಅಷ್ಟೊತ್ತಿಗೆ ಒಬ್ಬ ತಾತ ಬಂದ್ ಮದ್‌ಮಗಳ್ ಹಿಂಗೆ ಹೊರಗೆ ಬಾಕೆ ಆಗದ್ ಅಂತ ಹೇಳಿಕಾನ ಸಿಟ್ಟ್ ಬಂದರುಸ ತೋರ್ಸಿಕಣದೆ, ಇದೇ ಸರಿಯಾದ ಉಪಾಯಂತ ಒಳಗೆ ಹೋಗಿ ಕುದ್ದತ್. ಮತ್ತೆ ಮದುಮಗಳಾದ ಅಕ್ಕನೊಟ್ಟಿಗೆ ಹೊರಗೆ ಬಂದ್ ಲಾಯ್ಕ ಉಸಿರಾಡ್ತ್. ನಾ ಸಣ್ಣದಿರಿಕಾನ ಮೊದ್ವೆ ಮನೆಲಿ ಮಾಡ್ದ ದೊಡ್ಡ ಎಡವಟ್ಟ್‌ನ ಸಣ್ಣದಾಗಿ ಹೇಳ್ನೆ. ಆಗ ಈಗನಂಗೆ ಕೂದಲ್‌ನ ಕಟ್ಟದೆ ಬುಟ್ಟ್‌ಕಂಡ್ ಇರವು ಭಾರಿ ಕಡಿಮೆ ಇದ್ದೊ. ಆಗ ಏನಿದ್ದರುಸ ಉದುರಿ ಹಾಕಿ ನೇದ್ ಉದ್ದ ಜಡೆ ಮಾಡ್ತಿದ್ದೊ. ಇನ್ನ್ ಕೆಲವ್ಕೆ ನಿಜವಾಗಿಸ ಉದ್ದ ಕೂದ್ಲ್ ಇರ್ತಿತ್ತ್. ನಂಗೆ ಯಾಗ ಇಂತ ಉದ್ದ ಜಡೆ ಬಂದದೆಂತ ಕನ್ಸ್ ಕಾಣ್ತಿದ್ದೆ. ಹಿಂಗೆ ಮೊದ್ವೆ ಒಂದರ್ಲಿ ನಾಗವೇಣಿನಂತ ಜಡೆನ ನೋಡಿಕಂಡಿರಿಕಾನ, ಅಮ್ಮನೊಟ್ಟಿಗೆ ಬೇರೆ ನೆಂಟ್ರೆಲ್ಲ ಅದ್ ನಿಜವಾದ ಜಡೆ ಅಲ್ಲಂತ ಮಾತಾಡಿಕಣ್ತಿದ್ದೊ. ನಂಗೆ ಗೊತ್ತಿದ್ದಂಗೆ, ಉದುರಿನ ಕೂದ್ಲಿಗೆ ಸೇರ್ಸಿ ಕಟ್ಟಿದ್ದವೆ, ಎಳ್ದರೆ ಬಿದ್ದಂದೆಂತ ಯಾರೋ ಹೇಳ್ದ ಹಂಗೆ ಇತ್ತ್ ಮನ್ಸ್‌ಲಿ. ನಾ ಎಂತ ಮಾಡ್ದೆಂತ ಹೇಳ್ರೆ ಸೀದಾ ಹೋಗಿ ಆ ಹೆಂಗಸ್‌ನ ಜಡೆನ ಹಿಂದೆಂದ ಜೋರ್‌ಲಿ ಎಳ್ದು ಬುಟ್ಟೆ. ಹಿಂದೆಂದ ಒಮ್ಮೆಗೆ ಜಡೆ ಎಳ್ದದಕ್ಕೆ ಅವು ನನ್ನ ಕಣ್ಣ್ ಬುಟ್ಟ್ ನೋಡಿಕನೇ ನಂಗೆ ಎಲ್ಲಸ ಬಂದಂಗೆ ಆತ್! ಮುಂದೆನ ಕತೆ ನಾ ಹೇಳ್ದುಲೆ. ನೀವೇ ಅಂದಾಜ್ ಮಾಡಿ.

ಇನ್ನ್ ನಾವ್ ಹೋಕುಂತ ಇದ್ದ ಮೊದ್ವೆಗೆ ಹೋಗದೆ ಬೇರೆನೆ ಮೊದ್ವೆಗೆ ಹೋಗಿ ಉಂಡ್ ಬಂದ ದೊಡ್ಡ ಎಡವಟ್ಟ್‌ನ ಸಂಗತಿಗಳ ಸಣ್ಣ ಪಟ್ಟಿನೆ ನನ್ನತ್ರ ಉಟ್ಟು. ಈಗ ಮೊದ್ವೆಗಳ್ಲಿ ಪಚಾರ ಮತ್ತೆ ಊಟ ಒಟ್ಟಿಗೆ ಸುರು ಮಾಡ್ವೆ. ಮುಂದೆ ಉಂಡ್ ಹೋಗಿ ಮತ್ತೆ ಪಚಾರಲಿ ಹೋಗಿ ನೋಡ್ರೆ ಅಲ್ಲಿ ಜನ ಬೇರೆ! ನನ್ನ ದೂರದ ನೆಂಟ್ರ್ ತಾತ ಒಬ್ಬರ್ ಇಂಥ ಕಿತಾಪತಿ ಆದ ಸಂಗತಿನ ನನ್ನೊಟ್ಟಿಗೆ ಹೇಳ್ದೊ. ಅಲ್ಲಲ್ಲಿ ಅಲ್ಲಲ್ಲಿ ಸಮಾಜಗ ಸಮಾಜ ತುಂಬಾ ಮೊದ್ವೆ ಇರಿಕಾನ ನಂಗೆ ಹೆಂಗೆ ಗೊತ್ತಾದೆಂತ ಹೇಳಿ ಅವ್ವೇ ಸಮಾಧಾನ ಮಾಡಿಕಂಡೊ. ಮತ್ತೆ ವಾಪಾಸು ಅವು ಹೋಕಾಗಿದ್ದ ಮದ್ವೆಗೆ ಹೋದೊ ಗಡ. ಆದರೆ ಮತ್ತೆ ಅಲ್ಲಿ ಉಂಡರಿಯಂತ ಮಾತ್ರ ಕೇಳಿಕೆ ಮರ್ತ್ ಹೋತ್! ಮದ್ವೆ ಊಟದ ವಿಸಯಲಿ ಇನ್ನೊಂದು ಲಾಯ್ಕದ ಕತೆ ಉಟ್ಟು. ಪುಕ್ಸಟೆ ಊಟ ಸಿಕ್ಕಿದೆಂತ ಜನಸಾಗರಲಿ ಹೋಗಿದ್ದ್ ಉಂಡ್ ಬರುವ ಪುಣ್ಯಾತ್ಮರ್ ಒಳ. ಇಂಥ

ಸಂಗತಿಗಸ ನಂಗೆ ಗೊತ್ತುಟು. ಆದರೆ ಇಲ್ಲಿ ಅದ್ ಬೇಡ ಬುಡಿ. ಬರ್ದಷ್ಟ್ ಮುಗ್ಯದ ಈ ಮೊದ್ವೆ ಕಿತಾಪತಿಗ ಇನ್ನ್ ಸುಮಾರ್ ಒಳ. ಗೂಡೆ ಹೈದ ತಪ್ಪಿಹೋಗುವ ಸಂಗತಿಗ ಬೇಕಾದಷ್ಟ್ ನಡ್ದವೆ.

ಮೊದ್ವೆಲಿ ಗೊತ್ತಿಲ್ಲದಂಗೆ ಆಗ್ವ ಕಿತಾಪತಿಂದ ಬೇಕು ಬೇಕಂತಲೇ ಕಿತಾಪತಿ ಮಾಡುವವು ಇದ್ದವೆ. ಮೊದ್ವೆಂತ ಹೇಳ್ರೆನೆ ಹಿಂಗೆ! ಇಲ್ಲಿ ತಮಾಷೆ, ಸಡಗರ, ಕೋಪ, ತಾಪ ಎಲ್ಲಸ ಇದ್ದದೆ. ಜೀವನವೇ ಬದಲ್ ಮಾಡ್ವ ಶಕ್ತಿ ಇರ್ದು ಈ ಮೊದ್ವೆಗೆ ಮಾತ್ರ.

✍ ಸಂಗೀತ ರವಿರಾಜ್

ಬಾಲಂಬಿ ಅಂಚೆ
ಚೆಂಬು ಗ್ರಾಮ, ಮಡಿಕೇರಿ ತಾಲ್ಲೂಕು,
ಕೊಡಗು – 574234.

## "ಹಿಂಗಾರ" ಚಂದಾದಾರರ ತಿಳಿವಳಿಕೆಗೆ

ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಕಡೆಂದ ಪ್ರಕಟ ಆಗ್‌ವ 'ಹಿಂಗಾರ' ಪತ್ರಿಕೆನ ಎಲ್ಲವು ತುಂಬ ಅಭಿಮಾನಂದ ತಕಂಡ್ ಪ್ರೋತ್ಸಾಹಿಸೊಕು. ನೀವೆಲ್ಲವು ಅದರ ಸದಸ್ಯತ್ವ ಪಡ್‌ಕಣೊಕು. ಅದರ ತ್ರೈವಾರ್ಷಿಕ ಚಂದಾದರ ರೂ. 200.00 ಆಗುಟು. ಬಿಡಿ ಪತ್ರಿಕೆಗೆ ರೂ. 20.00. ಸದಸ್ಯರಾದವುಕೆ ಪತ್ರಿಕೆನ ಅಂಚೆಲಿ ಕಳ್ಸಿವೆ. ನಿಮ್ಮ ಪರಿಚಯಿಸ್ತರಿಗೆ ಸದಸ್ಯರ್ ಆಕೆ ದಯಮಾಡಿ ಹೇಳಿ.

ನಮ್ಮ ವಿಳಾಸ :

**ಸಂಪಾದಕರ್**

ಹಿಂಗಾರ ತ್ರೈಮಾಸಿಕ ಪತ್ರಿಕೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201

ಕೊಡಗು ಜಿಲ್ಲೆ

ಇ–ಮೇಲ್ : arebaseacademy@gamil.com

ವೆಬ್‌ಸೈಟ್ : www.arebhasheacademy.com

ದೂರವಾಣಿ : 08272 223055

(ಕತೆ)

# ಸೇಡ್

ಜೈಲ್‌ನ ಗೋಡೆಗೆ ತಲೆ ತಾಂಗಿ ಕುದ್ದ್ ಬಿಕ್ಕಿ ಬಿಕ್ಕಿ ಮರ್‍ದ್‌ತಿತ್ತ್ ಕಿಶನ್. ಶ್ರುತಿನ ಗ್ಯಾನ ಅವನ ಕುತ್ತಿ ಕುತ್ತಿ ಹಿಂಸೆ ಮಾಡ್ತಿತ್ತ್. ತನ್ನ ಮುಂದೆ ಬೂಟ್‌ನ ಸದ್ದಾಕನ ತಲೆಯೆತ್ತಿ ದಿಟ್ಟಿಸಿತ್. ಸಬ್‌ಇನ್ಸ್‌ಪೆಕ್ಟರ್ ಪ್ರಸಾದ್ ದಾಟಿ ಹೋಗ್‌ತಿತ್ತ್. ಒಟ್ಟಿಗೆ ಇದ್ದ ಮನ್ಸನ ಕಂಡ್ ಕಿಶನ್ ರೋಷಂದ 'ಥೂ........' ತೇಳಿ ಉಗ್ದು ಕಟಕಟಾತ ಹಲ್ಲ್ ಕಚ್ಚಿತ್. ಆ ಮನ್ಸ ಹುಸಿನಗೆಂದ " ಪೂವರ್ ಫೆಲೋ, ಮಾಡ್‌ಬಾರ್‍ದ್ ಮಾಡಿ ಈಗ ಅನುಭವಸ್ತಾ ಉಟ್ಟ್ ಹುಚ್ಚ" ತೇಳ್ತ್ ಎಸ್.ಪಿ.ನೊಟ್ಟಿಗೆ.

ಎಸ್.ಪಿ. ಪ್ರಸಾದ್ ತಿರಸ್ಕಾರಂದ ಕಿಶನ್‌ನ ದುರುಗುಟ್ಟಿ ನೋಡ್ತ್. "ಹುಚ್ಚ...... ಹುಚ್ಚ...... ಹ ಹ ಹ ಹಾ..... ನಾನ್ ಹುಚ್ಚನಾಗಿದ್ದರೆ ಲಾಯ್ಕ ಇತ್ತ್, ಅಯ್ಯೋ ಶ್ರುತಿ ನೀನಾರೆ ಬಂದ್ ಸತ್ಯ ಸಂಗತಿ ಹೇಳಿಯೊ" ನೀನ್ ಎಲ್ಲಿ ವಳ...... ನಿಂಗೆ ಎಂತ ಆಗುಟ್ಟೊ......" ತೇಳಿ ಮುಖ ಮುಚ್ಚಿ ಮರ್‍ದ್‌ಕೆ ಶುರು ಮಾಡ್ತ್.

ಕಮಲ ಸಿದ್ದಾಪುರದ ಬಡ ಹೆಂಗಸ್. ಸಣ್ಣ ವಯ್ಸ್‌ಲೆ ತನ್ನ ಗಂಡನ ಕಳ್ಕಂಡ್ ನಾಕ್ ವರ್ಷದ ಮಂಜ ಕಿಶನ್‌ನೊಟ್ಟಿಗೆ ಅವರಿವರ ಮನೆ ಕೆಲ್ಸ ಮಾಡಿ ಮಂಜನ ಸಾಕಿ ಕಂಡ್ ಬದ್ಕ್‌ತಿತ್ತ್. ಕಿಶನ್‌ನ ಅಪ್ಪ ಸಾಯಕನ ಅವ್ಕೆ ಯಾವ್ದೇ ಆಸ್ತಿ ಮಾಡಿ ಇಟ್ಟಿತ್‌ಲೆ. ಅವ್ಕೆ ಇದ್ದ ಸಣ್ಣ ಚಾಕರಿಲಿ ಹೆಣ್ಣ್ ಮತ್ತೆ ಮಂಜನ ಸಾಕ್‌ತಿದ್ದೊ. ಆದರೆ ಈಗ ಕಮಲಂಗೆ ಬ್ಯಾರೆ ದಾರಿನೇ ಇತ್ತ್‌ಲೆ.

ದೂರದ ನೆಂಟ ನಂಜಪ್ಪನವು ಕಿಶನ್‌ನ ಓದ್ಸಿಕೆ ಸಹಾಯ ಮಾಡ್‌ತಿದ್ದೊ ನಂಜಪ್ಪನವ್ರ ಹೆಣ್ಣ್ ಕುಸುಮ ಕಮಲನ ಪ್ರೀತಿಂದ ಕಾಂಬತಿದ್ದೊ, ಅವ್ಕೆ ಅವ್ರ ಮ್ಯಾಲೆ ಕನಿಕರನೂ ಇತ್ತ್. ಅವು ಸಹ ಅವ್ಕೆ ಎಲ್ಲಾ ರೀತಿಲಿ ಸಹಾಯ ಮಾಡ್‌ತ್ತಿದ್ದೊ. ಕಮಲಂಗೆ ಅವ್ರ ಸಹಾಯ ಪಡ್ಕಣಿಕೆ ಇಷ್ಟ ಇಲ್ಲದಿದ್ದರೂ ಬ್ಯಾರೆ ದಾರಿ ಇತ್ತ್‌ಲೆ. ಅದ್ಕಾಗಿ ಕಮಲ ಅವ್ರ ಮನೆ ಕೆಲ್ಸಲಿ ಸಹಾಯ ಮಾಡಿಕಂಡ್ ಆದಷ್ಟ್ ಅವ್ರ ಋಣನ ಕಮ್ಮಿ ಮಾಡಿಕಂಬತಿತ್ತ್.

ಕಮಲನ ಮಮತೆಂದ, ನಂಜಪ್ಪನವ್ರ ಸಹಾಯಂದ, ಕುಸುಮನವ್ರ ಪ್ರೀತಿಂದ ಕಿಶನ್ ದಿನಂದ ದಿನಕ್ಕೆ ಬೆಳ್ಕಂಡ್ ಬಂದ್ ಮುನ್ನಡೆಯತ್ತಿತ್ತ್.

ಕಿಶನ್ ನಂಜಪ್ಪನವ್ರ ಮನೆ ಮಂಜನಂಗೆ ಆಗಿ ಹೋಗಿತ್ತ್. ಅವನೂ ಅವ್ಕೆ ಬಹಳ ಸಹಾಯ ಮಾಡ್‌ತ್ತಿತ್ತ್.

ನಂಜಪ್ಪನವ್ರ ಒಬ್ಬಳೇ ಮಗ್ಳು ಶ್ರುತಿ ಮತ್ತೆ ಕಿಶನ್ ಒಂದೇ ಕ್ಲಾಸ್‌ಲಿ ಇದ್ರೊ. ನಂಜಪ್ಪನವು ಶಾಲೆಲಿ ಫೀಸ್ ಕಟ್ಟ್‌ಕನ ಕಿಶನ್‌ನ ಫೀಸು ಸಹ ಕಟ್ಟ್‌ತ್ತಿದ್ರೊ. ಮಗಳಿಗೆ ಬಟ್ಟೆ ಮಾಡ್ಕನ ಕಿಶನ್‌ಗೂ ಬಟ್ಟೆ ಕೊಡ್ಸ್‌ತಿದ್ರೊ.

ಆದರೆ, ಸ್ವಾಭಿಮಾನಿ ಕಮಲ ಬ್ಯಾಡತೇಳ್ರೆ ಕುಸುಮ ಪ್ರೀತಿಂದ ಗದರ್‌ಸಿ ತಾವ್ ಕಿಶನ್‌ಂದ ಒಮ್ಮೆಗೆ ಬಡ್ಡಿ ಸಮೇತ ವಸೂಲಿ ಮಾಡ್ವೆತ ಹೇಳ್‌ತಿದ್ರೊ.

ಕಿಶನ್ ಮತ್ತೆ ಶ್ರುತಿ ಯಾವ್ದೇ ಕ್ಲಾಸ್‌ಲಿ ಎಡ್ಗದೆ ಹೈಸ್ಕೂಲಿಗೆ ಬಂದಿದ್ರೊ. ಇಷ್ಟರವರೆಗೆ ಒಟ್ಟೊಟ್ಟಿಗೆ ಆಡಿ ಬೆಳ್ದಿದ್ದ ಶ್ರುತಿಗೆ ಮುಂದೆನಂಗೆ ಕಿಶನ್ ನೊಟ್ಟಿಗೆ ಇರಿಕೆ ಸಂಕೋಚ ಆಗ್ತಿತ್. ವಯಸ್ ಬೆಳ್ದಂಗೆ ಅವ್ಳು ಬಣ್ಣದ ಬದ್ಕ್‌ನತ್ತ ವಾಲ್ತ್. ಬಡತನ – ಸಿರಿತನ ತೇಳ್ವ ಭೇದ ತೋರ್ಸಿಕೆ ಶುರು ಮಾಡ್ತ್. ಇದ್ರಂದ ನಿರಾಶನಾತ್ ಕಿಶನ್. ಬಡವ ಕಿಶನ್‌ನ ಗೆಳೆತನ ಅವ್ಳಿಗೆ ಹಿತ ಆತ್‌ಲೆ. ಆದರೆ ಹಿರಿಯವು ಯಾವುದೇ ಬದಲಾವಣೆ ಇಲ್ಲದೆ ಮುಂದೆನಂಗೇ ಇದ್ರೊ.

ಶ್ರುತಿಗೆ ಓದ್‌ಲಿ ಇದ್ದ ಆಸಕ್ತಿ ಕಮ್ಮಿಯಾಗಿತ್. ಆದರೆ ಕಿಶನಂಗೆ ಲಾಯ್ಕ ಓದಿ ಒಳ್ಳ ಚಾಕರಿಗೆ ಹೋಗಿ ಅಮ್ಮನ ಸುಖವಾಗಿಡಕುತೇಳ್ದು ಅವನ ಒಂದೇ ಉದ್ದೇಶ ಆಗಿತ್. ಅದ್ಕೆ ಅಂವ ಹಗ್‌ಲ್ ಇರ್‌ಳ್ ಕಷ್ಟಪಡ್‌ತಿತ್. ಎಸ್ಸೆಲ್ಸಿ ಪರೀಕ್ಷೆಲಿ ಕಿಶನ್ ನೂರಕ್ಕೆ ತೊಂಭತ್ತೆರಡು ಮಾರ್ಕ್ ತೆಗ್ದ್ ಪಾಸಾದರೆ ಶ್ರುತಿ ಸೆಕಂಡ್ ಕ್ಲಾಸ್‌ಲಿ ಪಾಸಾಗಿತ್.

ನಂಜಪ್ಪನವು ನಿರ್ವಂಚನೆಂದ ಇಬ್ಬರ್‌ನ್ನೂ ಮಡಿಕೇರಿ ಕಾಲೇಜಿಗೆ ಸೇರಿಸಿದ್ರೊ. ಕಮಲ ತಾನ್ ಕೂಡ್ಸಿ ಮಡ್ಗಿದ್ದ ಪುಟ್ಟ ಗಂಟ್‌ನ ನಂಜಪ್ಪನವರ ಕೈಲಿ ಕೊಟ್ಟಿದ್ರೊ.

ಕಾಲೇಜ್‌ಲಿ ಕಿಶನ್‌ಗೆ ಜಾಸ್ತಿ ಗೆಳೆಯರ್ ಇತ್ತ್‌ಲೆ. ಇದ್ದ ಕೆಲವು ಗೆಳೆಯರೂ ಬಡವರೇ ಆಗಿದ್ರೊ. ಕಾಲೇಜ್‌ಲಿ ಬಡತನ ಸಿರಿತನಗಳ ಮೇಳವೇ ನಡ್ದಿತ್. ಶ್ರೀಮಂತ ವರ್ಗದವು ಕೇವಲ ಟೈಮ್ ಪಾಸ್‌ಗಾಗಿ ಕಾಲೇಜಿಗೆ ಬರ್ತಿದ್ರೊ. ಅಪ್ಪಂದ್‌ರ್ ಕೂಡ್ಸಿ ಮಡ್ಗಿದ್ದ ಗಂಟ್‌ನ ಕರ್ಗ್‌ಸುದೇ ಅವರ ಉದ್ದೇಶ ಆಗಿತ್. ಹಣಂದನೇ ಅವು ಡಿಗ್ರಿನ ಕೊಂಡ್‌ಕೊಂಬತಿದ್ರೊ. ಹಿಂದಿನವ್ಕೆ ಶಾಲೆ–ಕಾಲೇಜ್ ತೇಳ್ರೆ ಅದೊಂದು ದೇವಸ್ಥಾನ ತೇಳ್ವಂಗೆ ಕಾಣುತಿದ್ರೊ. ಆದರೆ ಇಂದ್! ಅದೊಂದು ಡಿಗ್ರಿ ನೀಡ್ವ ಯಂತ್ರ. ಇಲ್ಲಿ ಸ್ವಾಭಿಮಾನಕ್ಕೆ ನೆಲೆ ಇಲ್ಲೆ. ಪ್ರಾಮಾಣಿಕತೆಗೆ ಬೆಲೆ ಇಲ್ಲೆ. ಆಡ್ದೇ ಆಟ. ಹೇಳ್ದೆ ವೇದ ವಾಕ್ಯ. ಲೆಕ್ಚರರ್‌ಗಳ ಜುಟ್ಟು ವಿದ್ಯಾರ್ಥಿಗಳ ಕೈಯಿಲಿ. ಇಂತಹ ಪರಿಸ್ಥಿತಿಲಿ ನಡ್ದ ಒಂದ್ ಗಲಾಟೆಲಿ ವಿದ್ಯಾರ್ಥಿ ವೃಂದ ಎರ್ಡ್ ಹೋಳಾಗಿ ವಡ್ತ್.

ಒಂದ್ ಅಹಿಂಸಾ ಪ್ರತಿಪಾದಕರ್ದ್. ಇದ್ಕೆ ನಾಯಕ ಕಿಶನ್. ಇನ್ನೊಂದ್ ಗುಂಪಿಗೆ ಹಿಂಸೆಯೇ ಪ್ರಿಯ. ಅದಕ್ಕೆ ನಾಯಕ ಮಧುಕರ್. ಅಂವ ಶ್ರೀಮಂತ. ಹಂಗೇ ಗರ್ವಿಷ್ಟ ವ್ಯಕ್ತಿಯಾಗಿತ್.

* * * *

ಹಿಪ್ಪಿ ತಲೆ, ಕಪ್ಪು ಕನ್ನಡ್‌ಕ, ದೊಡ್ಡ ಮೀಸೆ ಬುಟ್ಟ್, ಬಾಯಿಲಿ ಯಾಗೋಳು ಚುಯಿಂಗ್‌ಗಮ್ ಅಗ್ದ್‌ಕಂಡ್ ಸಿನಿಮಾದ ವಿಲನ್‌ನಂಗೆ ಕಾಣ್ವ ಮಧುಕರ ತೇಳ್ರೆ

ಒಂದು ಕೆಟ್ಟ ಸ್ವಪ್ನ ಒಳ್ಳೆಯವ್ರ ಪಾಲಿಗೆ.

ಅಂವನ ಕೈಯಿಂದ ಸಿಕ್ಕ್‌ತಿದ್ದ ತಿಂಡಿ-ತೀರ್ಥಗಳಿಗೆ ಒಂದ್ ಹಿಂಡೇ ಅಂವನ ಹಿಂದೆ ಸುತ್ತುತಿದ್ದೊ. ಪರಸ್ಪರ ತದ್ವಿರುದ್ಧ ಅಭಿಪ್ರಾಯ ಇದ್ದ ಎರ್ಡ್ ಗುಂಪುಗಳ ನಡುಲಿ ಆಗಾಗ ಘರ್ಷಣೆ ಆಗ್‌ತಿತ್ತ್.

ಆದರೆ ಕಿಶನ್‌ನ ಮನ್ಸ್‌ನ ಕಲ್ಕಿದ ವಿಷ್ಯ ಶ್ರುತಿ ಮಧುಕರನ ಗೆಳೆತನ ಬೆಳ್ಸಿದ್. ಶ್ರುತಿಗೆ ಕಿಶನ್ ತೇಳ್ರೆ ತಿರಸ್ಕಾರ. ತಮ್ಮ ಮನೆ ಕೆಲ್ಸದವನಂಗೆ ಅಂವನ ಕಾಂಬತ್ತಿತ್ತ್. ಕಿಶನ್ ಒಮ್ಮೆ ಮಧುಕರನ ವಿಷ್ಯಲಿ ಎಚ್ಚರಿಕೆ ಹೇಳ್ದನ ಶ್ರುತಿ ಕಿಶನ್‌ಗೇ ಅವಮಾನ ಮಾಡಿತ್ತ್. ಅಂದ್‌ಂದ ಕಿಶನ್ ಶ್ರುತಿನ ವಿಷ್ಯಲಿ ತಲೆ ಕೆಡ್ಸಿ ಕಂಬದ್ನ ಬುಟ್ಟಿತ್ತ್.

* * * * *

ಅಂದ್ ಕಾಲೇಜ್ ಡೇ ಸಮಾರಂಭ ಮುಗ್ಯಕನ ರಾತ್ರಿ ಆಗಿತ್ತ್. ಎಲ್ಲವು ಹೊರ್ಟು ಹೋಗಿದ್ದರೂ, ಸ್ಟುಡೆಂಟ್ ಯೂನಿಯನ್ ಅಧ್ಯಕ್ಷ ಆಗಿದ್ರಂದ ಕಿಶನ್‌ಗೆ ಹೋಕೆ ಆಗಿತ್ತ್‌ಲೆ.

ಕಾಲೇಜ್‌ಂದ ಲಾಸ್ಟ್ ಬಸ್‌ಲಿ ಸಿದ್ಧಾಪುರಕ್ಕೆ ಬಾತ್. ಸಿದ್ಧಾಪುರಂದ ಮನೆಗೆ ಎರ್ಡ್ ಮೈಲ್ ಇತ್ತ್. ಅಲ್ಲೊಂದ್ ಇಲ್ಲೊಂದ್ ಮನೆ ಬುಟ್ರೆ ಮತ್ತೆ ಕಾಫಿ ತೋಟದ ಒಳಗೆ ನಡೆಯಕಾಗಿತ್ತ್.

ಬೆಳದಿಂಗಳ್ ಹರ್ಡಿತ್ತ್. ಕಿಶನ್ ಅವಸರಲಿ ಬರ್ತಾ ಇತ್ತ್. ಮನೆಗೆ ಇನ್ನೇನ್ ಅರ್ಧ ಮೈಲ್ ಉಟ್ಟ್ ತೇಳ್ಕನ ಸ್ವಲ್ಪ ದೂರಲಿ ಒಬ್ಬ ಹೆಂಗ್ಸ್ ಓಡಿಕಂಡ್ ಬಾತ್ತಿತ್ತ್, ಹಿಂದೆಂದ ಎರ್ಡ್ ಹೈದಂಗ ಓಡ್ಸಿಕಂಡ್ ಬಾತಿದ್ದೊ.

ಕಿಶನ್ ಓಡಿಕಂಡ್ ಆ ಹೆಂಗ್ಸ್‌ನ ಹತ್ರಕ್ಕೆ ಹೋತ್. ಶ್ರುತಿನ ಕಂಡ್ ಬೆಚ್ಚಿಬೀತ್. ಒಟ್ಟಿಗೆ ತಾನ್ ಸರಿಯಾದ ಸಮೆಲಿ ಬಂದೆ ತೇಳ್ವ ಕುಷಿನೂ ಆತ್.

ಅಷ್ಟೊತ್ತಿಗೆ ಓಡಿಕಂಡ್ ಬಂದ ಮಧುಕರ ಮತ್ತೆ ಅವನ ಗೆಳೆಯ ಪ್ರಸಾದ್‌ನ ಕಂಡ್ ರೋಷಲಿ ಹಲ್ಲ್ ಕಚ್ಚಿತ್.

"ಶ್ರುತಿ, ನೀನ್ ಯಾಕೆ ಇವರೊಟ್ಟಿಗೆ ಬಂದ"

"ಇಲ್ಲೆ ನಾನ್ ಬಸ್‌ಲೇ ಬಂದೆ, ಇವು ನನ್ನ ಫಾಲೋ ಮಾಡ್ಕಂಡ್ ಬಂದೊತ ಕಂಡದೆ. ನಾನ್ ಅರ್ಧ ದಾರಿಲಿ ಹೋಕನ ಮುಂದೆಂದ ಇವು ಬರ್ತಿದ್ದೊ, ನಂಗಿಂತ ಮುಂದೆ ಬಂದಿದ್ದೊತ ಕಂಡದೆ. ನಾನ್ ತೋಟದೊಳಗೆ ಓಡಿ ಓಡಿ ತಪ್ಸಿಕಂಡ್ ಇಷ್ಟ್ ಹೊತ್ತ್ ಆತ್. ನೀನ್ ದೇವ್ರಂಗೆ ಬಂದ" ತೇಳಿ ಕಿಶನ್‌ನ ತಬ್ಬಿಕಣ್ತ್.

ಮಧುಕರ ಶ್ರುತಿನ ಹತ್ರಕ್ಕೆ ಹೋತ್. ಶ್ರುತಿ "ಕಿಶನ್............." ತೇಳಿ ಕಿರ್ಚಿತ್. ಕಿಶನ್ ಮಧುಕರನ ದವಡೆಗೆ ಬಾರ್ಸಿ, ಹೊಟ್ಟೆಗೆ ಜಾಡ್ಸಿ ವದ್ದತ್. ಮಧುಕರ ಒಮ್ಮೆ ತತ್ತರ್ಸಿತ್. ಒಟ್ಟಿಗೆ ಇದ್ದ ಪ್ರಸಾದ್ ಅವನ ಸಹಾಯಕ್ಕೆ ಹೋತ್. ಮೂರು ಜನ್ರ ಮಧ್ಯೆ ಹೊಡ್ದಾಟ ನಡ್ತ್. ಶ್ರುತಿ ಮೂಕಳಾಗಿ ನೋಡಿಕಂಡ್ ನಿತ್ತಿತ್ತ್. ಅವ್ಳಿಗೆ ಏನು ಮಾಡ್ದುದ ಗೊತ್ತಾತ್‌ಲೆ. ಕಿಶನ್ ಬಾರದಿದ್ದರೆ ತನ್ನ ಸ್ಥಿತಿ ಎಂತಾಗ್‌ತಿತ್ತೋತ ನೆನ್ಸಿ ಶ್ರುತಿಗೆ ಶಾಕ್ ಹೊಡ್ದಂಗೆ ಆಗಿತ್ತ್.

ಕಿಶನ್ ಒಬ್ಬನೇ ಆದರೂ ಶಕ್ತಿ ಮೀರಿ ಹೋರಾಡ್ತ್. ಇನ್ನೇನ್ ಅಂವ ಕೆಳಗೆ ಉರುಳಕು ತೇಳುವಸ್ಟ್ ಹೊತ್ತಿಗೆ ಎದ್ರ್‌ಂದ ಬಂದ ಕಾರ್‌ನ ಕಂಡ್ ಮಧುಕರ್ ಮತ್ತೆ ಪ್ರಸಾದ್ ಪರಾರಿಯಾದೊ.

ಸುಸ್ತಾಗಿದ್ದ ಕಿಶನ್ ಅಲ್ಲೇ ಕುಸ್ದ್ ಬೀತ್. ಶೃತಿಗೆ ಎಂತ ಮಾಡ್ದುತ ಗೊತ್ತಾಗದೆ ಚಡಪಡ್ಸ್‌ತಿತ್ತ್. ಕಾರ್ ಇವ್ರ ಹತ್ರಲೇ ಬಂದ್ ನಿಲ್ಲ್‌ಕನ ಶೃತಿ ತಮ್ಮ ಕಾರ್‌ನ ಗುರ್ತಿಸಿತ್ ಇವ್ರ ಕರ್‌ಕಂಡ್ ಬಾಕೆ ಹೊರ್ಟ ನಂಜಪ್ಪನವ್ರ ಕಾರ್ ರಿಪೇರಿ ಆದ್ರಂದ ಅವು ಬಾಕೆ ತಡ ಆಗಿತ್ತ್. ಕಾರ್ ಬಾರದಿರ್ಕನ ಶೃತಿ ಬಸ್ಸ್ ಹತ್ತಿ ಬಂದಿತ್ತ್.

ಕಾರ್‌ಂದ ಇಳ್ದ ನಂಜಪ್ಪನವು ಗಾಬರಿಲಿ ಓಡಿ ಬಂದೊ. ವಿಷಯ ತಿಳ್ದ ಅವು ತಡಮಾಡದೆ ಕಿಶನ್‌ನ ಕರ್ಕೊಂಡ್ ಹೋಗಿ ಆಸ್ಪತ್ರೆಗೆ ಸೇರ್ಸಿದೊ. ನಂಜಪ್ಪನವ್ರ ಪ್ರಭಾವಂದ ಪೋಲೀಸರ್ ಮಧುಕರ್ ಮತ್ತೆ ಪ್ರಸಾದನ ಅರೆಸ್ಟ್ ಮಾಡಿ ಸರಿಯಾಗಿ ವದೆ ಕೊಟ್ಟಿದ್ದೊ. ಕೇಸ್ ದಾಖಲಾಗಿತ್ತ್. ಇದ್ರಂದಾಗಿ ಮಧುಕರ್ ಮತ್ತೆ ಪ್ರಸಾದನಲ್ಲಿ ಸೇಡ್‌ನ ಕಿಡಿ ಹೊತ್ತಿತ್ತ್. ಅವಿಬ್ಬರೂ ಸರಿಯಾದ ಸಮಯಕ್ಕಾಗಿ ಹಲ್ಲು ಕಚ್ಚಿ ಕಾದ್‌ಕೊಂಡಿದ್ದೊ.

ಆಸ್ಪತ್ರೆಲಿ ಕಿಶನ್ ಎರ್ಡ್ ದಿನ ಇತ್ತ್. ಶೃತಿನೇ ಕಿಶನ್‌ನೊಟ್ಟಿಗೆ ಇದ್ದ್ ಉಪಚಾರ ಮಾಡ್ತ್. ಅವ್ಳಿಗೆ ಕಿಶನ್ ನೊಟ್ಟಿಗೆ ಇದ್ದ ಓಂದೆನ ವರ್ತನೆಗೆ ಪಶ್ಚಾತಾಪ ಆಗಿತ್ತ್. ಅಂದ್ ತನ್ನ ಜೀವದ ಹಂಗ್ ತೊರ್‌ದ್ ತನ್ನ ಶೀಲ ಕಾಪಾಡ್ದ ದೇವರ್‌ತ ಅವ್ಳು ಕಿಶನ್‌ಗೆ ಮನಸ್‌ಲೇ ನಮಸ್ಕಾರ ಮಾಡ್ತ್.

* * * * *

ವರ್ಷಗ ಉರುಳಿ ಹೋಗಿದ್ದೊ. ಕಿಶನ್‌ನ ಓದ್ ಮುಗ್ದ್ ಅವಂಗೆ ಬ್ಯಾಂಕೊಂದರ್ಲಿ ಚಾಕರಿ ಸಿಕ್ಕಿತ್ತ್. ನಂಜಪ್ಪನವು ತಮ್ಮ ಮಗಳ್ ಶೃತಿನ ಕಿಶನ್‌ಗೆ ಕೊಟ್ಟ್ ಮದ್ವೆ ಮಾಡಿದ್ದೊ.

ಕಿಶನ್ ಶೃತಿನ ಜೀವನ ಸುಖವಾಗಿ ನಡ್ದಿತ್ತ್. ಹಾಲ್ ಜೇನ್‌ನಂಗೆ ಬೆರ್‌ತ್ ಜೀವನ ಮಧುರವಾಗಿತ್ತ್. ಕಮಲ ತಮ್ಮ ಮಂಜನೊಟ್ಟಿಗೆ ಆರಾಮಾಗಿ ನೆಲ್ಸಿದ್ದೊ.

ಮತ್ತೆ ಒಂದೆರಡ್ ವರ್ಷಲಿ ಕಿಶನ್‌ಗೆ ಬ್ಯಾರೆ ಊರಿಗೆ ವರ್ಗ ಆಗಿತ್ತ್. ಕಮಲ ಮತ್ತೆ ಶೃತಿನ ಒಟ್ಟಿಗೆ ಕರ್ಕೊಂಡ್ ಹೋಗಿತ್ತ್. ಕಿಶನ್ ಶೃತಿ ಆಗಾಗ ತವರು ಮನೆಗೆ ಬಂದ್ ಹೋಗಿ ಮಾಡ್ತಿತ್. ಅವ್ಳ ತವರ್‌ಲಿ ಸಹ ಅವ್ಳ ಬುಟ್ರೆ ಬ್ಯಾರೆ ಮಕ್ಕ ಇತ್ತಲೆ. ಹಾಗಾಗಿ ಅಪ್ಪ ಅವ್ವನ ನೋಡಿಕಂಬ ಜವಾಬ್ದಾರಿ ಅವ್ಳಿಗೆ ಇತ್ತ್.

ಕಿಶನ್ ಫೀಲ್ಡ್ ಆಫೀಸರ್ ಆಗಿದ್ರಂದ ಕೆಲವು ಸಲ ಮನೆಗೆ ಬಾಕೆ ಆಗ್ತ್‌ತಿತ್ಲೆ. ರಜಾ ದಿನಗಳಲಿ ಮಾತ್ರ ಇಬ್ಬರೂ ಹೊರಗೆ ಸುತ್ತಾಡಿಕೆ ಹೋಗ್‌ತಿದ್ದೊ.

ಒಂದ್ ಐತ್‌ವಾರ ಮಾರ್ಕೆಟ್‌ಲಿ ತರಕಾರಿ ತೆಗ್ದ್‌ಕಂಡ್ ಇರ್ಕನ ಎದುರ್ನ ಅಂಗಡಿಲಿ ನಿತ್ತಿದ್ದ ವ್ಯಕ್ತಿಗಳ್ನ ಕಂಡ್ ದೆವ್ವನ ಕಂಡಂಗೆ ಬೆಚ್ಚಿ ಬೀತ್ ಶೃತಿ. ಬಾಳ ವರ್ಷಗಳ ಮ್ಯಾಲೆ ಕಂಡ ಮಧುಕರನ ಕಣ್ಣ್‌ನ ದೃಷ್ಟಿಗೆ ಅವ್ಳು ತತ್ತರಿಸಿ ಹೋತ್. ಕಿಶನ್ ಉದಾಸೀನಂದ ಮುಂದೆ ನಡ್ಯಕನ ಶೃತಿ ಅವನೊಟ್ಟಿಗೆ ಸರಸರತ ಹೆಜ್ಜೆ ಹಾಕಿತ್.



3

ಸುಮಾರ್ ದಿನಕ್ಕೆ ಮುಟ್ಟ ಅವನ ಆ ಕಣ್ಣ್‌ನ ದೃಷ್ಟಿ ಅವ್ಳ ನೆನಪ್‌ನ ಆಳಲಿ ಕುತ್ತುತ್ತಿದ್ದರೂ ಮತ್ತೆ ದಿನ ಕಳ್ದಂಗೆ ಅದ್ ಮರ್ತ್ ಹೋತ್.

ಅಂದ್ ಕಿಶನ್ ಸಾಲ ವಸೂಲಾತಿಗಾಗಿ ಬ್ಯಾಂಕ್‌ಂದ ಫೀಲ್ಡ್‌ಗೆ ಹೋನೆತ ತಿಳ್ಸಿತ್ತ್. ಕಿಶನ್ ಹೋಗಿ ಅರ್ಧ ಗಂಟೆಲಿ ಫೋನ್ ಬಾಕನ ಕಿಶನ್ ಎಂತದೋ ಮರ್ತುಟ್ಟೇನೋತ ಹೇಳ್ಕಂಡ್ ಫೋನ್ ರಿಸೀವ್ ಮಾಡ್ತ್. ಅತ್ತಂದ ಬ್ಯಾರೆ ಯಾರ್‍ದೊ ಸ್ವರ ಕೇಳ್ಕನ ಗಾಬರಿ ಆತ್.

"ಹಲೋ, ಮೇಡಂ ನಾನ್ ಡ್ರೈವರ್ ರಾಜುಂತ ಸಿದ್ಧಾಪುರಂದ ಮಾತಾಡ್ತಾ ಇರ್‍ದು. ಯಜ್‌ಮಾನ್ರ್ ನಿಮ್ಗೆ ಫೋನ್ ಮಾಡಿಕೆ ಹೇಳಿ ನಂಬರ್ ಕೊಟ್ಟೊಳೊ"
" ರಾಜು ನಾ, ನೀನ್ ಯಾರ್" ?

" ನಾನ್ ಹೊಸ ಡ್ರೈವರ್, ಈಗಾಗಿ ಸೇರಿವಳೆ. ನಿಮ್ಮ ಅಮ್ಮಂಗೆ ಉಸಾರಿಲ್ಲೆ. ಯಜ್‌ಮಾನ್ರ್ ಅವ್ರನ್ನ ಆಸ್ಪತ್ರೆಗೆ ಸೇರ್ಸಿ ವಳೊ. ಅವು ಡಾಕ್ಟ್ರ ಹತ್ರ ಹೋಗೊಳೊ. ನಿಮ್ಗೆ ತಿಳ್ಸಿಕೆ ಹೇಳ್ದೊ. ನೀವ್ ಸಿದ್ಧಾಪುರಕ್ಕ ಬಂದ್ ಫೋನ್ ಮಾಡ್ರೆ ನಾನ್ ಕರ್‍ಕಂಡ್ ಹೋನೆ"ತ ಹೇಳ್ತ್. ಶ್ರುತಿಗೆ ಬಾಳಾ ಗಾಬರಿ ಆತ್. ಅವ್ಳ ಎದೆ ಬಡ್ತ ಜಾಸ್ತಿ ಆತ್. ಅವ್ಳಿಗೆ ಏನ್ ಮಾಡ್ದುತ ಗೊತ್ತಾತ್‌ಲೆ.

ಕಿಶನ್‌ನ ಮೊಬೈಲ್‌ಗೆ ಫೋನ್ ಮಾಡ್ತ್. ಕಿಶನ್ ಫೀಲ್ಡ್‌ಗೆ ಹೋಗಿ ಬಿಟ್ಟಿತ್ತ್. "ಶ್ರುತಿ ಗಾಬರಿ ಆಗ್ಬಡ. ನಾನ್ ಸ್ವಲ್ಪ ದೂರಲಿ ವಳೆ ನೀನ್ ಬೇಗ ಹೊರ್‍ಟು ಹೋಗಿ ಅಲ್ಲಿಂದ ಎಂತ ವಿಷ್ಯತ ಫೋನ್ ಮಾಡ್. ಅಗತ್ಯ ಇದ್ದರೆ ನಾನ್ ತಕ್ಷಣ ಬನ್ನೆ"ತ ಹೇಳ್ತ್.

ಶ್ರುತಿ ಅತ್ತೆಗೆ ಹೇಳಿ ಒಂದೆರಡ್ ಬಟ್ಟೆ ಬ್ಯಾಗಿಗೆ ಹಾಕಿಕಂಡ್ ಬಸ್‌ಸ್ಟ್ಯಾಂಡ್‌ಗೆ ಬಾತ್. ಹೊರ್‍ಟ್ ನಿತ್ತಿದ್ದ ಬಸ್ಸಿಗೆ ಹತ್ತಿ ಕುದ್ದ್ ಕಾರ್ ಡ್ರೈವರ್‌ಗೆ ಫೋನ್ ಮಾಡ್ತ್.

ಊರಿಗೆ ಬಂದ್ ಬಸ್ಸ್ ಇಳಿಯಕನ ಯಾರೂ ಕಂಡತ್‌ಲೆ. ಅಪ್ಪಂಗೆ ಫೋನ್ ಮಾಡ್ರೆ ಸ್ವಿಚ್ ಆಫ್ ಬಾತ್. ಅವ್ಳಿಗೆ ಗಾಬರಿ ಆತ್. ಕತ್ತಲೆ ಬ್ಯಾರೆ ಆಗಿತ್ತ್. ಮನ್ಸಿಗೆ ನೂರೆಂಟ್ ಗ್ಯಾನಗ ಬಂದ್ ಹೋದೊ.

ಅಮ್ಮಂಗೆ ಏನಾರ ಆತ? ಅಪ್ಪ ಯಾಕೆ ಫೋನ್ ತಕಣ್‌ತ್‌ಲೆ. ಡ್ರೈವರ್ ಬ್ಯಾರೆ ಕಾಂಬಲೆ. ಹೊಸ ಡ್ರೈವರ್ ತೇಳ್ತ್. ಅವನ ಹೆಂಗೆ ನಂಗೆ ಗೊತ್ತಾದೆ? ನಾನ್ ಅರ್ಜೆಂಟ್‌ಲಿ ಯಾವ ಆಸ್ಪತ್ರೆತ ಕೇಳ್ತ್‌ಲೆ. ಅವ್ಳಿಗೆ ಹೆದ್ರಿಕೆ ಆತ್. ಓಂದೆ ಮುಂದೆ ಗ್ಯಾನ ಮಾಡದೆ ಹೊರ್‍ಟ್ ಬಂದಾಗಿತ್ತ್.

ಅಮ್ಮ ಮನೇಲಿ ಇರ್‍ದೋನ ಇಲ್ಲ್ಯೋ ನೋಡನ ಯಾವ್ದಕ್ಕೂ ಮನೆಗೆ ಪೋಯಿತ ಗ್ಯಾನ ಮಾಡ್ತ್. ಮತ್ತೆ ಅಪ್ಪಂಗೆ ಫೋನ್ ಮಾಡ್ರೆ ಸ್ವಿಚ್ ಆಫ್ ಬಾತ್, ಟ್ಯಾಕ್ಸಿ ಮಾಡಿಕಂಡ್ ಪೋಯಿತ ಗ್ಯಾನ ಮಾಡಿ ಟ್ಯಾಕ್ಸಿನ ಕರ್‍ತ್. ಅಷ್ಟೊತ್ತಿಗೆ ಅವ್ಳ ಹತ್ರಲೇ ಒಂದ್ ಕಾರ್ ಬಂದ್ ನಿತ್ತತ್. ಕಾರ್‌ಲಿ ಇದ್ದ ವ್ಯಕ್ತಿ ಇವ್ಳ ಮಾತಾಡ್ಸ್‌ಕನ ಇವ್ಳಿಗೆ ಸ್ವಲ್ಪ ಧೈರ್ಯ ಬಾತ್.

"ನೀವು ಶ್ರುತಿ ಅಮ್ಮ ಅಲ್ಲಾ"

"ಹೌದು........"

"ನಾನ್ ಕಾರ್ ಡ್ರೈವರ್ ರಾಜು. ಸ್ವಲ್ಪ ತಡ ಆಗೋತು. ಯಜ್‌ಮಾನ್ರ ಮತ್ತೆ ಅಮ್ಮನ ಈಗ ಮನೆಗೆ ಬುಟ್ಟು ಬಂದೆ, ಬನ್ನಿ ಮನೆಗೆ ಪೋಯಿ"ತ ಕರ್ತ್.

"ಇದ್ ಯಾವ ಕಾರ್ ನಮ್ಮ ಕಾರ್ ಅಲ್ಲ ಅಲಾ"

"ಕಾರ್‌ನ ಸರ್ವಿಸ್‌ಗೆ ಬುಟೊಳೊ ಇದ್ ನನ್ನ ಟ್ಯಾಕ್ಸಿ"

"ಮತ್ತೆ ಅಪ್ಪ ಫೋನ್ ಮಾಡ್ರೆ ತೆಗ್ತ್‌ಲೆ"

"ಯಜಮಾನ್ರ ಫೋನ್ ಚಾರ್ಜ್ ಇಲ್ಲದೆ ಸ್ವಿಚ್ ಆಫ್ ಆಗುಟ್ಟು, ಇಲ್ಲಿ ಮಳೆ ಗಾಳಿಂದಾಗಿ ಎರ್ಡ್ ದಿನಂದ ಕರೆಂಟ್ ಇಲ್ಲೆ. ಇಂದ್ ಮಳೆ ಬುಟ್ಟುಟ್ಟು ಅಷ್ಟೆ.

"ಸರಿ......"

ಶ್ರುತಿನ ಬ್ಯಾಗ್‌ನ ಕೇಳಿಕಂಡ್ ಡ್ರೈವರ್ ಕಾರ್‌ಲಿ ಇಸಿತ್. ಶ್ರುತಿಗೆ ಯಾಕೋ ಏನೊ ಸರಿ ಇಲ್ಲೆತ ಅನ್ಸಿಕೆ ಶುರು ಆತ್.

ಕಾರ್ ಮನೆ ಕಡೆ ಹೊರ್ಟತ್. ಸುಮಾರ್ ಒಂದು ಮೈಲು ಹೋಕನ ದಾರಿಲಿ ಕಂಡ ಎರ್ಡ್ ಜನದ ಹತ್ರ ಕಾರ್ ನಿತ್ತತ್.

ಆ ಎರ್ಡ್ ಜನನ ಕಂಡ್ ಶ್ರುತಿ ಹೆದ್ರಿ ಕಿರ್ಚಿತ್. ಡ್ರೈವರ್‌ಗೆ ಕಾರ್ ನಿಲ್ಸ್‌ತ ಹೇಳ್ತ್. ಆದರೆ ಡ್ರೈವರ್‌ಂದ ಯಾವುದೇ ಪ್ರತಿಕ್ರಿಯೆ ಬಾತ್‌ಲೆ. ಆ ಇಬ್ಬರೂ ಮುಂದೆನ ಸೀಟ್‌ಲಿ ಕಷ್ಟಲಿ ಕುದ್ದಿದ್ದೊ. ಶ್ರುತಿ ಹಿಂದೆನ  ಸೀಟ್‌ಲಿ ಕುದ್ದಿತ್ತ್. ಅವ್ಳ ಮುಖಂದ ಬೆವರ್ ಇಳಿಯತಿತ್ತ್.

ಸ್ವಲ್ಪ ಮುಂದೆ ಹೋಕನ ಕಾರ್‌ನ ದಾರಿ ಬದಲಾತ್ತ್. ಶ್ರುತಿ ಡ್ರೈವರ್‌ನ ಕೇಳ್ಕನ ಮುಂದೆ ಕುದ್ದಿದ್ದವ್ರಂದ ಅಟ್ಟಹಾಸದ ನಗೆ. ಮುಂದೆ ಕುದ್ದಿದ್ದಂವ ತನ್ನ ಜೋಬುಂದ ಕೈ ವಸ್ತ್ರ ತೆಗ್ದ್ ಶ್ರುತಿನ ಹತ್ರ ಬಗ್ಗ್‌ಕನ ಶ್ರುತಿ ಹೆದ್ರಿ ಕಿರ್ಚಿತ್. ಕ್ಷಣಲಿ ಅವ್ಳು ಸ್ವಯ ತಪ್ಪಿ ಕಾರ್‌ನ ಸೀಟಿಗೆ ವರ್ಗಿತ್.

* * * * *

ಬ್ಯಾಂಕ್‌ಲಿ ಅಕೌಂಟ್ಸ್ ಮಾಡಿಕಂಡ್ ಕುದ್ದಿದ್ದ ಕಿಶನ್ ಫೋನ್ ಕಾಲ್ ಬಾಕನ ಬಹುಶಃ ಅತ್ತೆಗೇನಾರ ಆತೇನೊ ಅದಕೆ ಶ್ರುತಿ ಇಲ್ಲರೆ ಮಾವ  ಫೋನ್ ಮಾಡಿರ್‍ವೊತ ಗ್ಯಾನ ಮಾಡಿ ಫೋನ್ ತಕಣ್ತ್. ಅತ್ತಂದ ಯಾವ್ದೋ ಅಪರಿಚಿತ ಸ್ವರ ಕೇಳಿ ಆಶ್ಚರ್ಯ ಆತ್.

"ಏನ್ ಮರಿ ಶ್ರುತಿನ ಗ್ಯಾನ ಮಾಡ್ದ. ನಿನ್ನ ಶ್ರುತಿ ಈಗ ನನ್ನ ಹತ್ರ ಉಟ್ಟು. ಈಗ ನಿನ್ನ ಆಟ ತೋರ್ಸು ನೋಡನ. ಪೊಲೀಸ್‌ಗೆ ಏನಾರ ತಿಳ್ಸಿರೆ ನೀನ್ ಶ್ರುತಿನ ಹೆಣ ಕಾಂಬಕಾದೆ. ನೀನ್ ಅವ್ಳ ಕಾಣೋಕುತಾದರೆ ನಾಳೆ ಬೆಳಿಗ್ಗೆ 10ಗಂಟೆಗೆ "ಬೆಟ್ಟದ ಮನೆಗೆ" ಬಾ. ತೇಳಿ ಮುಂದೆ ಮಾತಿಗೆ ಅವಕಾಶ ಕೊಡದೆ ಫೋನ್ ಕಟ್ ಮಾಡ್ತ್.

ಕಿಶನ್ ಹುಚ್ಚನಂಗೆ ಆಗಿತ್ತ್. ಆಗಲೇ ರಜೆ ಬರ್ದ್ ಮನೆಗೆ ಓಡ್ತ್ "ಅಯ್ಯೊ ಶ್ರುತಿ" ತ ಅಂವನ ಮನ್ಸ್ ಮರ್ಡ್‌ತಿತ್ತ್.

"ಬೆಟ್ಟದ ಮನೆ" ತ ಕೇಳ್ಕನ ಅಂವನ ಮೈ ರೋಷಂದ ಕೊದ್ದ್ ಹೋತ್. ಅದ್ ಅವಂಗೆ ಚಿರಪರಿಚಿತ ಹೆಸರ್. ಅಂವನ ಕಡುವೈರಿ ಮಧುಕರನ ಮನೆ ಅದ್. ಬಸ್ಸ್‌ಂದ ಇಳ್ದ ಕಿಶನ್ ಸೀದಾ 'ಬೆಟ್ಟದ ಮನೆ' ಕಡೆ ಓಡ್ತ್. ಸ್ವಲ್ಪ ದೂರ ಓಡ್ಕನ ಮುಂದೆಂದ ಬಂದ ಹಳ್ಳಿಯವ

"ಯಾಕ್ಬುದ್ಧಿ ಓಡ್ತೊಳ್ರಿ. ಅಲ್ಲಿ ಯಾರೋ ಬಿದ್ದೊಳೊ ನೋಡಿಕೆ ಓಡ್ತೊರ್ಳಿಯಾ".

"ಏನ್ ಯಾರೋ ಬಿದ್ದೊಳೊನಾ"

ಕಿಶನ್ ಅತ್ತ ಓಡ್ತ್. ಅಂವನ ಮನ್ಸ್‌ಲಿ ಶ್ರುತಿ ಸುಳಿದಾಡ್ತ್. ಇಂವ ಅಲ್ಲಿಗೆ ಓಡ್ದಕು ಎದುರ್‌ಂದ ಪೊಲೀಸ್ ಜೀಪು ಬರೋದಿಕ್ಕು ಸರಿಯಾತ್. ಕಿಶನ್‌ಗೆ ಆಶ್ಚರ್ಯ ಆತ್. ಪೊಲೀಸ್ ಸಮವಸ್ತ್ರಲಿ ಇದ್ದ ಪ್ರಸಾದ್! ಒಟ್ಟಿಗೆ ಇದ್ದ ಮಧುಕರ್!!

ಮಧುಕರ ಪ್ರಸಾದನ ಕಡೆಗೆ ಕಣ್ಸನ್ನೆ ಮಾಡ್ತ್. ಪ್ರಸಾದ್ ಸಬ್‌ಇನ್ಸ್‌ಪೆಕ್ಟರ್ ಗತ್ತ್‌ಂದ ಗದರ್ಸಿತ್. ಆ ವ್ಯಕ್ತಿನ ಕೊಲೆ ಮಾಡ್ದಕ್ಕಾಗಿ ನಿನ್ನ ಅರೆಸ್ಟ್ ಮಾಡ್ತಾವಳೆ ತೇಳ್ತ್. ಮುಂದೆನೇ ಮನಸ್‌ನ ಸ್ಥಿಮಿತ ಕಳ್ಕಂಡಿದ್ದ ಕಿಶನ್‌ನ ಕೈಯಿಂದ ಆ ವ್ಯಕ್ತಿಯ ಹೊಟ್ಟೆಗೆ ಹಾಕಿದ್ದ ಚಾಕುನ ಬಲಾತ್ಕಾರಂದ ತೆಗ್ಸಿದೊ.

ಕಿಶನ್ ತಾನ್ ನಿರಪರಾಧಿತ ಕಿರ್ಚಿಕೊಂಡರೂ ಕೇಳದೆ ಸ್ಟೇಷನ್ನಿಗೆ ಕರ್ದೊಂಡ್ ಹೋದೊ. ಕಿಶನ್‌ಗೆ ಏನೊಂದೂ ಅರ್ಥ ಆಗದೆ ದಿಗ್ಭ್ರಾಂತನಂಗೆ ಕುದ್ದಿತ್ತ್. ಅಂವನ ಸ್ಥಿತಿ ಕಟುಕನ ಕೈಗೆ ಸಿಕ್ಕಿದ ಕುರಿನಂಗೆ ಆಗಿತ್ತ್. ಇದ್ ಉದ್ದೇಶಪೂರ್ವಕವಾಗಿ ಬೀಸಿದ ಬಲೆತ ಅಂವಂಗೆ ತಿಳ್ದ್‌ಹೋತ್, ಆದರೆ ಅಂವ ನಿಸ್ಸಾಹಾಯಕ ಆಗಿತ್ತ್.

ಕೋರ್ಟ್‌ಲಿ ಕಿಶನ್ ಕೊಲೆ ಮಾಡ್ದನ್ನ ತಾನ್ ನೋಡ್ದೆತ ಮಧುಕರ್ ಸಾಕ್ಷಿ ಹೇಳ್ತ್. ಚಾಕುನ ಮ್ಯಾಲೆ ಇದ್ದ ಕಿಶನ್ ನ ಬೆರಳ ಗುರ್ತ್ ಅದ್‌ನ ಸಾಬೀತ್ ಪಡ್ಸಿತ್ತ್. ಕಿಶನ್ ತನಿಗೆ ಏನೂ ಇಲ್ಲದಂಗೆ ನಿರ್ವಕಾರ್‌ಂದ ನಿತ್ತಿತ್ತ್. ನಂಜಪ್ಪನವು ಅಂವನ ಕೊಲೆ ಕೇಸಿಂದ ತಪ್ಸಿಕೆ ಬಾಳ ಪ್ರಯತ್ನ ಪಟ್ಟೊ, ಅವು ನೇಮಿಸಿದ್ದ ಪ್ರಸಿದ್ಧ ಲಾಯರ್‌ಂದಾಗಿ ಮತ್ತೆ ಅವನ ಸೌಜನ್ಯ ನಿಷ್ಕಳಂಕ ವರ್ತನೆಂದಾಗಿಯ್ಯೊ ನ್ಯಾಯಾದೀಶರ್ ಅಂವಂಗೆ ಏಳು ವರ್ಷಗಳ ಶಿಕ್ಷೆ ವಿಧಿಸಿದೊ. ಕಿಶನ್ ನಾಕ್ ಗೋಡೆಗಳೊಳಗೆ ಬಂದಿ ಆತ್.

* * * * *

ಮಧುಕರ್ ಕಿಶನ್‌ನ ಮ್ಯಾಲೆ ಸೇಡ್ ತೀರ್ಸಿಕಂಡಿತ್ತ್. ಅವನ ಕಡೆ ಡ್ರೈವರ್‌ನ ಹೆದರ್ಸಿ ಬೆದರ್ಸಿ ಶ್ರುತಿಗೆ ಫೋನ್ ಮಾಡ್ಸಿ ಅವಳ್ನ ಕರ್ಸಿ ಕಂಡಿತ್ತ್. ಇದ್ಯಾವುದೂ ತಿಳಿಯದೆ ಶ್ರುತಿ ಹೊರ್ಟು ಬಂದಿತ್ತ್. ನಂಜಪ್ಪನವರ ಹೊಸ ಡ್ರೈವರ್ನ ಅವನೇ ಸೃಷ್ಟಿ ಮಾಡಿತ್ತ್. ತನ್ನ ಕಡೆಯವನಾದ ಡ್ರೈವರ್‌ಗೆ ಶ್ರುತಿನ ತನ್ನ ನೆಂಟತಿತ ಹೇಳಿ ಕರ್ಕಂಡ್ ಬಾಕೆ ಮಾಡಿತ್ತ್.

ಮಧುಕರ ಕಾರ್‌ಲಿ ಕೊಟ್ಟಿದ್ದ ಕ್ಲೋರೋ ಫಾರಂದಾಗಿ ದಿನ ಇಡೀ ಸ್ವಯ ಇಲ್ಲದೆ ಮಲ್ಗಿದ್ದ ಶ್ರುತಿನ ಕಂಡ್ ಡ್ರೈವರ್‌ಗೆ ಕ್ರಮೇಣ ಕರುಣೆ ಉಕ್ಕಿತ್. ಅವಂಗೆ

ಅವಳ ವಯಸ್‌ನ ಮಗಳ್ ಇತ್ತ್. ಮಾರನೇ ದಿನ ಅವ್ಳಿಗೆ ಸ್ವಯ ಬಂದ್ ನರಳಾಡ್‌ಕ್ಕನ ತಾನೇ ಅವಳಿಗೆ ಉಪಚಾರ ಮಾಡ್ತ್. ಅವ್ಳಿಗೆ ಹಾಲು ಬಿಸ್ಕೇಟ್ ಕೊಟ್ಟತ್.

ನಿರ್ವಿಕಾರಂದ ಸಣ್ಣ ಕೂಸ್‌ನಂಗೆ ಕೊಟ್ಟದೆಲ್ಲಾ ತಿಂಬಕನ ಡ್ರೈವರ್‌ಗೆ ಕರುಣೆ ಉಕ್ಕಿ ಬಾತ್. ಮೆಲ್ಲೆ ಅವ್ಳ ತಲೆ ಸವ್ರಿತ್. ಅಂವ ಸಂಸಾರಿಯೇ. ಗೊತ್ತಿಲ್ಲದೆ ಇವರ ಜಾಲಲಿ ಸಿಲುಕಿತ್ತ್. ಮಧುಕರನ ವಿಷ್ಯ ತಿಳ್ದಿತ್ತ್. ಅಂವನ ಬಗ್ಗೆ ಅಸಹ್ಯ ಹುಟ್ಟಿತ್ತ್. ಶ್ರುತಿಗೆ ಪೂರ ಎಚ್ಚರ ಆತ್. ಎದುರಿಗೆ ಇದ್ದ ಇವನ ಕೇಳ್ತ್.

"ನೀನ್ ಯಾರ್"

"ನಿನ್ನ ಅಣ್ಣ" ತೇಳ್ತ್ ಅಂವ

"ಅಣ್ಣ........" ತೇಳಿ ಮತ್ತೆ ಹೇಳ್ತ್ ಶ್ರುತಿ

ಆಗಲೇ ಅವಳ ವಿಷ್ಯ ಎಲ್ಲಾ ತಿಳ್ಕಂಡಿದ್ದ ಅಂವ ಹೆಂಗಾರ ಮಾಡಿ ಮಧುಕರಂಗೆ ಗೊತ್ತಾಗದಂಗೆ ಅವಳ್ನ ಮನೆ ತಲ್ಪಿಸಕುತೇಳಿ ಮೆಲ್ಲೆ ಹೊರಗೆ ಕರ್‍ಕೊಂಡ್ ಹೋತ್. ಮಧುಕರ ಪ್ರಸಾದನ ಜೀಪ್‌ಲಿ ಬೆಳಿಗ್ಗೆನೇ ಎಲ್ಲಿಗೋ ಹೋಗಿತ್ತ್. ಶ್ರುತಿನ ಎಚ್ಚರಲಿ ಕಾಯೋಕುತ ತಿಳ್ಸಿ ಹೋಗಿತ್ತ್..

ಮಧುಕರನ ಅಪ್ಪ ಅಮ್ಮ ನಾಲ್ಕ್ ದಿನದ ಓಂದೆ ಮಗಳ ಮನೆ ಚೆನ್ನೈಗೆ ಹೋಗಿದ್ದೊ. ಅವು ಇದ್ದಿದರೆ ಈ ರೀತಿ ಆಗ್‌ತಿತ್ತ್‌ಲೆತ ಕಂಡದೆ.

ರಭಸಲಿ ಓಡ್ದ ಕಾರ್ ನಂಜಪ್ಪನವರ ಮನೆ ತಲ್ಪ್‌ಕನ ನಂಜಪ್ಪನವು ಮನೆಲಿ ಇತ್ತ್‌ಲೆ. ಕುಸುಮ ಕುರ್ಚಿಲಿ ಕುದ್ದಿದ್ದವು ಎದ್ದ್ ಬಂದೊ. ಶ್ರುತಿನ ಇಳ್ಸಿದ ಡ್ರೈವರ್ ಬಂದ ರಭಸಲೇ ವಾಪಾಸ್ ಹೊರ್‍ಟು ಹೋತು.

ಕುಸುಮ, "ಬಂದಾ ಶ್ರುತಿ ಯಾಕೆ ಓಂಗೊಳ. ಉಸಾರಿಲ್ಲೆನಾ? ಕಿಶನ್ ಎಲ್ಲಿ" ಒಂದೇ ಉಸುರಿಗೆ ಕೇಳ್ವ ರಭಸಲಿ ಶ್ರುತಿ ಅವರ್‍ನ ವಿಚಿತ್ರವಾಗಿ ನೋಡ್ತ್. ಮಾತಾಡ್ತ್‌ಲ್ಲೆ, ಕುಸುಮ ಅವಳ್ನ ವಳಗೆ ಕರ್‍ಕೊಂಡೋಗಿ ಕೂರ್‍ಸಿದೊ.

ಅವ್ಕೆ ಹೆದ್ರಿಕೆ ಆತ್. ಶ್ರುತಿ ಯಾಕೆ ಬಾತ್? ಯಾರ್ ಕರ್‍ಕೊಂಡ್ ಬಂದೊ? ಒಂದೂ ಗೊತ್ತಾತ್ಲೆ. ಸ್ವಲ್ಪ ಹೊತ್ತಿಗೆ ಬಂದ ನಂಜಪ್ಪನವು ವಿಷ್ಯ ತಿಳ್ದ್ ಗಾಬರಿಯಾದೊ. ಶ್ರುತಿಗೆ ಎಲ್ಲಾ ಮರ್‍ತ್ ಹೋಗಿತ್ತ್.

ನಂಜಪ್ಪವು ತಡಮಾಡದೆ ಅವಳ್ನ ಡಾಕ್ಟರ ಹತ್ರ ಕರ್‍ಕೊಂಡು ಹೋದೊ. ಕಿಶನ್‌ನ ವಿಚಾರ್‍ಸಿರೆ ಅಂವ ಪತ್ತೆ ಇಲ್ಲವಾಗಿತ್ತ್.

ಮದ್ದ್, ಇಂಜೆಕ್ಷನ್‌ಂದ ಪ್ರಯೋಜನ ಆತ್‌ಲೆ. ಯಾವುದೊಂದು ತಿಳಿಯದೆ ಚಿಂತೆ ಶುರು ಆತ್. ಡಾಕ್ಟರ್ ಅವಳ್ನ ಮನೋ ವೈದ್ಯರಲ್ಲಿಗೆ ಕರ್‍ಕೊಂಡು ಹೋಕೆ ತಿಳ್ಸಿದೊ. ಮನೋವೈದ್ಯರ್ ಅವಳ್ನ ಪರೀಕ್ಷೆ ಮಾಡಿ ಯಾವುದೋ ಒಂದು ಘಟನೆಂದ ಅವ್ಳ ಮೆದುಳಿಗೆ ಶಾಕ್ ಆಗುಟ್ಟುತ ತಮ್ಮ ಉಪಚಾರ ಶುರು ಮಾಡ್ದೊ.

* * * *

ಶ್ರುತಿನ ಮನೆಗೆ ಬುಟ್ಟ್ ಬರುವ ಹೊತ್ತಿಗೆ ಮಧುಕರ್ ಶತಪಥ ಹಾಕ್ತಿತ್ತ್. ಡ್ರೈವರ್‌ನ ಕಂಡ್ ಅಂವನ ರೋಷ ಉಕ್ಕಿತ್.

ಅಂವನ ಕಾಂಬಕನೇ "ನನ್ನ ಉಪ್ಪು ಉಂಡ್ ನಂಗೇ ಮೋಸಮಾಡಿಯಾ" ತೇಳಿ ಜಾಡ್ಸಿ ಒದ್ದತ್.

ಡ್ರೈವರ್‌ನ ಸಹನೆ ತಪ್ಪಿತ್. ಒಂದ್ ಹೆಣ್ಣ್ ಮಗಳ್ನ ಕಾಪಾಡ್ದ ಕುಶಿ ಎಲ್ಲ ಹಾರಿ ಹೋತ್. ಕೈ ಕೈ ಮಿಲಾಯ್ಸಿತ್. ಮಧುಕರ ವಳಗೆ ಓಡ್ತ್. ಅಂವನ ಹಿಂದೆ ಓಡ್ದ ಡ್ರೈವರ್ ಮರುಕ್ಷಣಲಿ "ಅಮ್ಮಾ" ತೇಳಿ ಕೆಳಗೆ ಉರ್ಳಿತ್.

ಮಧುಕರ ಅಂವನ ಹೊಟ್ಟೆಗೆ ಚಾಕುಲಿ ತಿವಿದಿತ್ತ್. ಅಂವನ ಹೆಣನ ಕಾರ್ ಡಿಕ್ಕಿಲಿ ಹಾಕಂಡ್ ಸ್ವಲ್ಪ ದೂರ ತಕೊಂಡ್ ಹೋಗಿ ಬಿಸಾಡಿ ಬಾತ್. ತನ್ನ ಗೆಳೆಯ ಪ್ರಸಾದ್ ಇನ್ಸ್‌ಪೆಕ್ಟರಾಗಿದ್ರಂದ ಅಂವನ ಕೆಲ್ಸಗಳೆಲ್ಲಾ ಸಲೀಸಾಗಿ ನಡೆಯತಿತ್ತ್.

ಪ್ರಸಾದನ ಬೆಂಬಲ ಅವಂಗೆ ಇತ್ತ್. ಅಲ್ಲದೆ ಪ್ರಸಾದಂಗೂ ಕಿಶನ್‌ನ ಮ್ಯಾಲೆ ಹಗೆ ಇದ್ರಂದ ಇಬ್ಬರೂ ಕೂಡಿ ರಚಿಸಿದ ಷಡ್ಯಂತ್ರಲಿ ಕಿಶನ್ ಸಿಲುಕಿ ನಲುಗಿ ಹೋಗಿತ್ತ್. ನಂಜಪ್ಪನವ್ಕೆ ಪೋಲಿಸ್ ಸ್ಟೇಷನ್‌ನಿಂದ ಕರೆ ಬಾಕನ ಗಾಬರಿಯಾತ್. ವಿಷ್ಯ ಎಂತತ ಗೊತ್ತಾತ್‌ಲೆ. ಅಲ್ಲಿ ಹೋದ ಮ್ಯಾಲೆ ವಿಷ್ಯ ತಿಳ್ದ್ ತಲೆ ಮ್ಯಾಲೆ ಆಕಾಶನೇ ಬಿದ್ದಂಗೆ ಆತ್.

ಒಂದ್ ಕಡೆ ಕೊಲೆ ಆಪಾದನೆಗೆ ಒಳಗಾದ ಅಳಿಯ. ಇನ್ನೊಂದು ಕಡೆ ಮತಿಹೀನ ಮಗಳ್. ಪೂರ್ವ ಜನ್ಮದ ಕರ್ಮದ ಫಲತೇಳಿ ಅವು ರೋಧಿಸ್‌ತಿದ್ದೊ. ಅವು ಮಾಡ್ದ ಪ್ರಯತ್ನಗ ಎಲ್ಲಾ ವಿಫಲಾಗಿ ಕಿಶನ್ ಜೈಲ್ ಸೇರಿತ್ತ್. ಶ್ರುತಿಗೆ ಕಿಶನ್‌ನ ವಿಷ್ಯ ಹಂಗೆ ಕಿಶನ್‌ಗೆ ಶ್ರುತಿ ವಿಷ್ಯ ತಿಳ್ಸಿತ್‌ಲೆ.

ಇದೇ ಕೊರಗ್‌ಲೇ ಕುಸುಮ ತೀರಿಕೊಂಡಿದ್ದೊ. ಕಮಲ ನಂಜಪ್ಪನವ್ರ ಮನೆಲಿ ಇದ್ದ್‌ಕಂಡ್ ಕಣ್ಣೀರ್‌ಲಿ ದಿನ ಕಳಿಯತಿದ್ದೊ. ಅವು ಹಾಕ್‌ತಿದ್ದ ಶಾಪ ಎದೆ ನಡುಗಿಸುವಂಗೆ ಇತ್ತ್. ನಂಜಪ್ಪನವ್ಕೆ ಕಿಶನ್ ನಿರಪರಾಧಿತ ತಿಳ್ದಿದ್ದರೂ ಅದ್ಕೆ ಯಾವುದೇ ಸಾಕ್ಷಿ ಇತ್ತ್‌ಲೆ.

ಇನ್ನೊಂದು ಕಡೆ ಮಧುಕರ್ ಅಟ್ಟಹಾಸಲಿ ಮೆರಿಯತ್ತಿತ್ತ್. ಅಂವನ ಸೇಡ್ ಮುಗ್ದಂಗೆ ಕಾಂಬತಿತ್ಲೆ. ಶ್ರುತಿನ ಮನಸ್ಥಿತಿಲಿ ಯಾವುದೇ ಬದಲಾವಣೆ ಕಾಂಬತಿಲ್ಲೆ. ಕಿಶನ್, ಶ್ರುತಿ ಲಾಯ್ಕ ಇರ್ಕನ ಯಾಗೋಳು ಸ್ವಲ್ಪ ದೂರಲಿ ಇರ್ವ ಕೆರೆ ಹತ್ರ ಸಾಯಂಕಾಲದ ಹೊತ್ತು ಕುದ್ದ್ ಕಾಲ ಕಳೆಯುತ್ತಿದ್ದೊ. ಶ್ರುತಿ ಈಗಲೂ ಎಷ್ಟೊ ಹೊತ್ತ್ ಶೂನ್ಯದತ್ತ ದೃಷ್ಟಿನೆಟ್ಟು ಕುದ್ದಿರ್‌ತಿತ್ತ್. ಕಡೆಗೆ ನಂಜಪ್ಪ ನವೊ, ಕಮಲನವೊ ಕರ್ಕಂಡ್ ಬಾಕಾಗಿತ್ತ್.

ಅಂದ್ ಕಿಶನ್‌ನ ಬಿಡುಗಡೆ ದಿನ. ನಂಜಪ್ಪನವು ಕಾರ್ ತಕಂಡ್ ಹೋಗಿದ್ದೊ. ಆದರೆ ಅವು ತಲ್ಪಿಕೆ ಮುಂದೆನೇ ಕಿಶನ್ ಹೊರ್ಟು ಹೋಗಿತ್ತ್. ನಿರಾಶೆಯಿಂದ ನಂಜಪ್ಪನವು ಅವ್ನ ಹುಡ್ಕಿಕಂಡ್ ಹೊರ್ಟೊ.

ಕಿಶನ್ ಮನಸ್ ಬಂದಕಡೆ ಕಾಲೆಳೆದ್ ಕಂಡ್ ನಡ್ದಿತ್ತ್. ಅಂವಂಗೆ ಗೊತ್ತು ಗುರಿ ಇಲ್ಲದಾಗಿತ್ತ್. ಶ್ರುತಿ ಸತ್ತು ಹೋಗುಟ್ಟುತ ಅಂವನ ನಂಬಿಕೆಯಾಗಿತ್ತ್, ಅಂವ

ನಂಜಪ್ಪನವರ್ನ ಕೇಳ್ಕನ ಅವು ತಲೆ ಬಗ್ಗಿಸಿದ್ದೊ.

ರಸ್ತೆ ಬದಿಲಿ ನಡ್ಕಂಡ್ ಹೋಗ್‌ತ್ತಿದ್ದ ಕಿಶನ್ ಸಾಯಂಕಾಲದ ಹೊತ್ತಿಗೆ ಕೆರೆಯ ಕಡೆ ಯಾಂತ್ರಿಕತೆಂದ ನಡ್ದಿತ್ತ್.

ಅಂವನ ಕಡೆಗೆ ರಬಸಲಿ ಬೈಕೊಂದು ನುಗ್ಗಿ ಬಾಕನ ಅಂವ ಪಕ್ಕಕ್ಕೆ ಹಾರಿ ತಪ್ಪಿಸಿಕಣ್ತ್. ಬೈಕ್ ನೆಟ್ಟಂಗೆ ಹೋಗಿ ಮುಂದೆ ಇದ್ದ ಮರಕ್ಕೆ ಡಿಕ್ಕಿ ಹೊಡ್ದು ಕೆಳಗೆ ಉರ್ಳಿತ್. ಅದೇ ಸಮೆಲಿ ಎದುರಿಂದ ಬರ್ತಿದ್ದ ಹೆಂಗಸ್ ಜೋರಾಗಿ ಕಿರ್ಚಿ ಕೆಳಗೆ ಬೀಳ್ಕನ ಕಿಶನ್ ಅತ್ತ ಧಾವಿಸಿತ್. ಅಂವಂಗೆ ತನ್ನ ಕಣ್ಣ್‌ನ ತಾನೇ ನಂಬಿಕೆ ಆತ್ಲೆ.

"ಶ್ರುತಿ..........." ತೇಳಿ ಓಡಿ ಅವ್ಳ ಹತ್ರ ಹೋತ್. ಅವ್ಳಿಗೆ ಸ್ವಯ ಇತ್ತ್‌ಲೆ. ಪಕ್ಕದ ಕೆರೆಂದ ನೀರ್ ತಂದ್ ತಟ್ಟಿ ಉಪಚರಿಸಿತ್. ಸ್ವಲ್ಪ ಹೊತ್ತಿಗೆ ಅವ್ಳಿಗೆ ಎಚ್ಚರ ಆತ್.

"ನಾನ್ ಎಲ್ಲಿ ವಳೆ" ತೇಳಿ ಎದ್ದತ್ ಕಣ್ಣ್ ತೆರ್ದ್ ನೋಡ್ಕನ ಎಲ್ಲಾ ವಿಚಿತ್ರವಾಗಿ ಕಂಡತವಳಿಗೆ. ತಾನ್ ಇಲ್ಲಿಗ್ಯಾಕೆ ಬಂದೆತ ಸುತ್ತಲೂ ನೋಡ್ತ್. ಎಲ್ಲಾ ಘಟನೆಗ ಮನಪಟಲಲಿ ಹಾದು ಹೊದೊ.

ಕಿಶನ್ ಬೈಕ್ ಬಿದ್ದಲ್ಲಿಗೆ ನಡ್ತ್. ಆ ವ್ಯಕ್ತಿಗೆ ಬಾಳಾ ಪೆಟ್ಟಾಗಿ ನೆಲಕ್ಕೆ ಉರ್ಳಿತ್ತ್. ಮಧುಕರ! ತನ್ನ ಬಾಳ್‌ಲಿ ಬೀಸಿಬಂದ ಚಂಡಮಾರುತ! ಆದರೂ ಮಾನವೀಯತೆ ಮೂಡಿ ನೀರ್ ಕುಡ್ಸಿ ಗಾಳಿ ಹಾಕಿತ್. ಅಷ್ಟೊತ್ತಿಗೆ ಶ್ರುತಿನೂ ಅಲ್ಲಿಗೆ ಬಾತ್. ಸ್ವಲ್ಪ ಸಮಯ ಕಳಿಯಕನ ಅಂವ ಕಷ್ಟಲಿ ಕಣ್ಣ್ ಬುಟ್ಟ್ ನೋಡ್ತ್. ಆ ನೋಟಲಿ ಶೌರ್ಯ ಕರ್ಗಿ ಪಶ್ಚಾತ್ತಾಪ ಮೂಡಿತ್ತ್. ನಾನ್ ಇಷ್ಟ್ ಕಷ್ಟ ಕೊಟ್ಟರೂ ತನ್ನ ವೈರನ ಮರ್ತ್ ತನ್ನ ತೊಡೆ ಮ್ಯಾಲೆ ತಲೆ ಇಟ್ಟ್‌ಕಂಡ್ ಉಪಚಾರ ಮಾಡ್ತಿರ್ವ ಕಿಶನ್.

"ಕಿಶನ್............" ತೇಳಿ ಏನೋ ಹೇಳಿಕೆ ಹೋಗಿ ಕಣ್ಣ್‌ಲಿ ನೀರ್ ತುಂಬ್ಸಿತ್, ಇತ್ತ ತಿರ್ಗ್‌ಕನ ಶ್ರುತಿನ ಕಂಡ್ ಕುಶಿಲಿ ಕಣ್ಣ್ ಅರಳಿತ್. ನನ್ನ ಪಾಪಕ್ಕೆ..... ತಕ್ಕ....... ಪ್ರಾಯಶ್ಚಿತ ಆತ್....... ದೇವರೇ ನಂಗೆ ಸರಿಯಾದ ಶಿಕ್ಷೆ ಕೊಡ್ತ್.......... ಶ್ರುತಿ......... ನಿರಪರಾಧಿ........... ಅವಳ ಕೈ ಬುಡ್‌ಬಾಡ ನನ್ನ.......... ಕ್ಷಮಿಸಿ ಬುಡ್..........." ತೇಳುವಷ್ಟರ್ಲಿ ಅಂವ ಮೂಕನಾಗಿತ್ತ್. ಅಷ್ಟೊತ್ತಿಗೆ ಹುಡ್ಕಿಕಂಡ್ ಬಂದ ನಂಜಪ್ಪನವ್ಕೆ ಕಿಶನ್– ಶ್ರುತಿನ ಕಂಡ್ ಕುಸೀಲಿ ಮಾತೇ ಬಾತ್‌ಲೆ. ಅವರ್ನ ಬಾಚಿ ತಬ್ಬಿಕಂಡೊ.

ಮಧುಕರನ ಮನೆಯವ್ಕೆ ವಿಷಯ ತಿಳ್ಸಿಕೆ ನಂಜಪ್ಪನವು ಅತ್ತ ಹೊರ್ಟೊ. ಕಿಶನ್ – ಶ್ರುತಿ ಮನೆ ಕಡೆ ಹೊರ್ಟೊ. ಅದ್ ಮನೆ ಕಡೆತ ಅನ್ಸದೆ ಹೊಸ ಬಾಳ್‌ನ ಕಡೆತ ಅನ್ಸಿತ್ತ್. ಕಿಶನ್ ನಿನ್ನ ಇನ್ನ್ ಎಂದಿಗೂ ಬುಡ್‌ದುಲೆ ತೇಳ್ವಂಗೆ ಅವಳ್ನ ಎದೆಗೊತ್ತಿ ನಡ್ದಿತ್ತ್.

ಮಾರನೆ ದಿನ ಪೇಪರ್‌ಲಿ ಇನ್ಸ್‌ಪೆಕ್ಟರ್ ಪ್ರಸಾದ್ ಅಪಘಾತಲಿ ಕೈ ಕಾಲ್ ಕಳ್ಕಂಡ ಸುದ್ದಿ ಮುಖಪುಟಲಿ ಇತ್ತ್.

✍ಕಟ್ರತನ ಲಲಿತ ಅಯ್ಯಣ್ಣ

ಗೌಳಿಬೀದಿ,
ಮಡಿಕೇರಿ.

# ಛೆ... ಯಾಕೆ ಹಿಂಗಾತ್ ?

ತಂಪಾದ ಪೊರ್ಲುನ ವಾತಾವರಣ. ಬೇಜರಲಿ ತಲೆಗೆ ಕೈ ಹೊತ್ತು ಕುದ್ದ ಭಾಗ್ಯಮ್ಮನ ಕಂಡ್ ಶಿವಪ್ಪಂಗೆ ಅವಳ್ನ ಹೆಂಗೆ ಸಮಾಧಾನ ಮಾಡಕುತ್ತನೇ ಗೊತ್ತಾಕ್ತಿಲ್ಲೆ. ಮೊಕಲಿ ಮೌನ ಆವರಿಸಿಟು.

ಜೀವನಲಿ ತುಂಬಾ ಜನಗ ತಮ್ಮ ಸ್ವಾರ್ಥಕ್ಕಾಗಿ ಬದ್ಕುವೆ. ಇನ್ನ್ ಹಂಞ ಜನಗ ಬೇರೆಯವ್ಕಾಗಿ ಬದ್ಕುವೆ. ಭಾಗ್ಯಮ್ಮನ ಯಾವ ಗುಂಪ್ಗೆ ಸೇರ್ಸಕುತ ಶಿವಪ್ಪಂಗೆ ಗೊತ್ತಾಕ್ತಿಲೆ. ಬೇರೆಯವ್ಕಾಗಿ ಬದ್ಕದಿದ್ದರು ಯಾರೇ ಕಷ್ಟಲಿ ಇದ್ದರೆ ಅವ್ಕೆ ಕೈಲಾದಷ್ಟ್ ಸಹಾಯ ಮಾಡ್ವ ಗುಣ ಶಿವಪ್ಪನ ಹೆಣ್ಣ್ ಭಾಗ್ಯಮ್ಮಂದ್. ಎಲ್ಲವರ ಬದ್ಕ್‌ಲಿ ಸಾಧನೆ ಮಾಡ್ವ ಉದ್ದೇಶನೆ ಯಾರ ಹಂಗ್ ಇಲ್ಲದೇ ಖುಷಿಲಿ ಬದ್ಕಕುತ. ಅದ್ಕಾಗಿ ಬೇರೆಯವ್ಕೆ ಬೇನೆ ಕೊಡ್ಕಾಗದ್‌ತೇಳ್ದು ಭಾಗ್ಯಮ್ಮ-ಶಿವಪ್ಪ ದಂಪತಿಗಳ ಆಶಯ.

ಎರಡ್ ಹೆಣ್ಣ್, ಎರಡ್ ಗಂಡ್ ಮಕ್ಕಳ ಸುಖ ಸಂಸಾರ ಭಾಗ್ಯಮ್ಮ-ಶಿವಪ್ಪ ಇವರ್ದ್. ಅತ್ತೆ ಮಾವ ಇಲ್ಲೆ. ಭಾಗ್ಯಮ್ಮ ನಾದಿನಿಗಳ ಪಾಲ್‌ಗೆ ಸಾಕ್ಷತ್ ಭಾಗ್ಯಲಕ್ಷ್ಮಿನೇ ಆಗಿತ್ತ್. ಗಂಡ ಮಕ್ಕಳೊಟ್ಟಿಗೆ ಬಂದ್ ತವರು ಮನೆಲ್ಲಿನ ಆಟಿ, ಕೈಲ್ ಮೂರ್ತ, ಹುತ್ತರಿ ಹಬ್ಬಗಳ ಆಚರ್ಸಿ ಹೋಗ್ತಿದ್ದೊ ಅವು.

ಪೇಟೆಲಿ ಗೂಡಂಗಡಿ ಇಟ್ಟ್‌ಕಂಡ್ ಟೈಲರ್ ಕೆಲ್ಸ ಮಾಡಿಕಂಡ್ ಇರ್ವ ಶಿವಪ್ಪನ ಪೊರ್ಲುನ ಗುಣಕ್ಕೆ ತನ್ನ ಮಗಳ್ನ ಖುಷಿಲಿ ಅವಂಗೆ ಧಾರೆಯೆರೆದ್ ಕೊಟ್ಟತ್ ರಾಮಪ್ಪ. ಅಮ್ಮ ಪೊಪ್ಪನ ಐದ್ ಮಕ್ಕಳ್ಲಿ ಹಿರಿಮಗಳಾಗಿ ಪೊರ್ಲುಲಿ ಪ್ರೀತಿಲಿ ಬೆಳ್ದಿತ್. ತಕ್ಕ ಮಟ್ಟಿಗೆ ಬೇಕಾದಷ್ಟ್ ವಿದ್ಯೆನ ಪಡ್ಕಂಡಿತ್ ಭಾಗ್ಯಮ್ಮ.

ನೆರೆಮನೆಯವರ ಒಟ್ಟಿಗೆ ಪ್ರೀತಿಲಿ ಹೊಂದಿಕಂಡ್ ಇತ್ತ್. ಕೃಷಿ ಕೆಲ್ಸಗಳ್ನ ಕೂಡಿಕಂಡ್ ಮಾಡ್ತಿದ್ದೊ. ಭಾಗ್ಯಮ್ಮ ಮೂಢನಂಬಿಕೆಂದ ದೂರನೇ ಇತ್ತ್. ದೇವ್ರೂನ ತುಂಬಾನೇ ನಂಬ್‌ತ್ತಿತ್ತ್. ಬೆಳ್ದಂತ ಬೆಳೆಲಿ ಹಸ್-ಕರ್‌ಗ್ಳ್ಲಿ, ಸೂರ್ಯ-ಚಂದ್ರರ್ಲಿ ದೇವ್ರೂನ ಕಾಣ್ತಿತ್, ಮನೆ ಹಕ್ಕಲೆ ಬೇರೆ ಬೇರೆ ಜಾತಿ ಧರ್ಮದ ಜನಗ ವಾಸಮಾಡಿಕಂಡ್ ಇದ್ದರೂ ಹಂಞನೂ ಭೇದ ಮಾಡ್ತಿತ್ಲೇ.

ಹೊಳೆಕರೆ ನಂಜಮ್ಮ ಹೊಳೆಕರೆಲಿ ವಾಸಮಾಡಿಕಂಡ್ ಇತ್ತ್. ಆ ವರ್ಷ ಸುರ್ದ ಜೋರ್ ಮಳೆಲಿ ಹೊಳೆ ತುಂಬಿ ಗದ್ದೆಲಿ ಇದ್ದ ನಾಟಿ, ತೋಟ, ಮನೆಯೆಲ್ಲ ಕೊಚ್ಚಿಕಂಡ್ ಹೋತ್. ನಂಜಮ್ಮನ ಸಂಸಾರ ಬೀದಿಗೆ ಬಾತ್. ಸಾಲ, ಮಕ್ಕಳ ವಿದ್ಯಾಭ್ಯಾಸ, ಕೃಷಿನೂ ಇಲ್ಲೆ, ಕೈಲಿ ಮಡ್ಡು ಇಲ್ಲದ ಸ್ಥಿತಿಕಂಡ್ ಮನ್ನಾರೆ ನೊಂದ್ ಕಂಡತ್

ಭಾಗ್ಯಮ್ಮ.

"ಕೈಲಿ ಹಂಙ ಕಾಸ್ ಇರ್ಕನ ಬೇಕಾದಷ್ಟ್ ನೆಂಟ್ರ್‌ಗ, ಕೈಲಿ ಹಂಙ ಕಾಸ್ ಕಮ್ಮಿ ಆತ್ ತೇಳ್ಕನ ನೆಂಟ್ರ್ ಇಲ್ಲೆ ಯಾರೂ ಇಲ್ಲೆತೇಳ್ವ ಮಾತ್ಗ ನಂಜಮ್ಮನ ಸಮೆಲಿ ನಿಜನೇ ಆಗಿತ್ತ್. ಅರೆ ಹೊಟ್ಟೆ, ಅವಮಾನ, ಬದ್ಕುವ ಎಲ್ಲಾ ದಾರಿನೂ ಮುಚ್ಚೇ ಹೋಗಿತ್ತ್. ಪಾಪತ ಹೇಳ್ದುಕಿಂತ, ಅವ್ಳಿಗೆ ಬಾರಿ ಹಾಂಕಾರ ಇತ್ತ್. ಈಗ ಸ್ವಲ್ಪ ಸದ್ದ್ ಅಡಗಿರೊಕುತ ಹೇಳ್ವ ಜನಗ ಜಾಸ್ತಿಯಾಗಿತ್ತ್.

ಗಂಡ ಸಾಲಕ್ಕೆ ಹೆದ್ರಿ ಮನೆಗೆ ಬಾರದೆ ಊರೇ ಬುಟ್ಟ್ ಹೋಕನ ನಂಜಮ್ಮ ತುಂಬಾ ಸೋತುಹೋತ್. ಊರ್‌ಗ್ಗೆ ಹೆಸ್ರ್‌ವಾಸಿಯಾದ ಬಡ್ಡಿ ಬಂಗಾರಮ್ಮನ ಚುಚ್ಚು ಮಾತ್‌ಗೆ ಹೆದ್ರಿ ನಂಜಮ್ಮ ಮನೆಂದನೇ ಹೊರ್‌ಗ್ಗೆ ಬಾತಿತ್ಲೆ. ಬೇರೆಯವರ್‌ನ ನೋಯಿಸಿ ಸಂತೋಷ ಪಡ್ವ ಬಡ್ಡಿ ಬಂಗಾರಮ್ಮ ನಂಜಮ್ಮನ ಪಾಲ್‌ಗೆ ದೆವ್ವದ ಮುಖದಂಗೆ ಕಾಣ್ತಿತ್.

ಯಾರ್‌ನ್ನಾರ್ ಕೈಯೊಡ್ಡಿ 10-20 ಕಾಸ್ ಕೊಡಿತ ಕೇಳಿರೆ ಒಂದ್ ಕಾಸ್‌ನೂ ಸಿಗ್ತಿತ್ಲೆ. ಹಿಂಗೆ ದಿಕ್ಕ್ ದೆಸೆ ಇಲ್ಲದ ಸಮೆಲಿ ದೇವರಂಗೆ ಬಂದ್ ಸೋತ ಮನ್ಸ್‌ಗೆ ಧೈರ್ಯ ಹೇಳ್ವ ಕೆಲ್ಸನ ಮಾಡ್ತ್ ಭಾಗ್ಯಮ್ಮ.

"ಕಾಲತೇಳ್ದು ಇದ್ದಂಗೆ ಇರಿಕಿಲೆ, ಒಂದಲ್ಲಾ ಒಂದ್ ದಿನ ಸುಖತೇಳ್ದು ಸಿಕ್ಕೇ ಸಿಕ್ಕಿದೆ". ಬಡ್ಡಿ ಬಂಗಾರಮ್ಮನ ಮಾತ್ನ ಮನ್ಸ್‌ಗೆ ತಕಬೇಡ. ಒಂದೆರಡ್ ಉದಾಹರಣೆ ಕೊಟ್ಟ್ ಭಾಗ್ಯಮ್ಮ ಹೇಳ್ತ್ .

ಮಕ್ಕಳ ಬಟ್ಟೆ, ತನ್ನ ಇರ್ವ ಸೀರೆಗಳ್ಲಿ ಪೊರ್ಲುನ ಸೀರೆ, ಊಟಕ್ಕೆ ಅಕ್ಕಿ, ಬೇಳೆ, ಮಕ್ಕಳಿಗೆ ಶಾಲೆಗೆ ದುಡ್ಡುಗಳ್ನ ತನ್ನ ಕಷ್ಟದ ಬದ್ಕುಲಿನೂ ನಂಜಮ್ಮಂಗೆ ಕೊಟ್ಟ್ ಭಾಗ್ಯಮ್ಮ ಸಹಾಯ ಮಾಡ್ತಿತ್. ಹಂಗೆ ತನ್ನ ಮಕ್ಕಳಿಗೆ ಒಳ್ಳ ವಿದ್ಯಾಭ್ಯಾಸ ಕೊಡ್ಸಿ ಉದ್ಯೋಗಕ್ಕೂ ಸೇರ್ಸಿತ್ ಭಾಗ್ಯಮ್ಮ.

ತಮ್ಮ ತೋಟಲಿ ಬೆಳ್ದ ಕಿತ್ತುಳಿ, ಸೀಬೆಕಾಯಿ, ಬಾಳೆಣ್ಣ್, ಕಬ್ಬು, ಪಪ್ಪಾಯಿಗಳ್ನ ಕೊಟ್ಟ್ ಹಸಿವ್‌ನು ಸ್ವಲ್ಪ ಮಟ್ಟ್‌ಗೆ ಕಡಿಮೆ ಮಾಡ್ಸ್‌ತ್ತಿತ್ ಭಾಗ್ಯಮ್ಮ.

ಅಂದರೆ ..........ಬೆಳ್ದ್ ನಿತ್ತ ಸಾಲ ಮುಂದೆ ದಾರಿ ಏನ್ ? ಕೂಲಿ ಮಾಡಿ ಗೊತ್ಲೆ. ಗಂಡ ಲೆಕ್ಕಕಷ್ಟೆ. ಅಂವ ಊರ್ ಬುಟ್ಟ್ ಹೋಗುಟು. ಸಾಲದವರ ಕೆಟ್ಟ ಬೈಗುಳ ಕೇಳಿಕಾದುಲೆ ..........

"ಅಕ್ಕ ಎಲ್ಲಿಯಾರ್ ದೇವ್ರು ಬರೋಲ್ಲಿಗೆ ಪೋಯನಾ, ಯಾಕೆ ಎಲ್ಲಾ ಹಿಂಗಾತ್‌ತ ಕೇಳ್ನೋತ" ನಂಜಮ್ಮ ಒಂದ್ ದಿನ ಭಾಗ್ಯಮ್ಮನ ಕೇಳ್ತ್.

"ಅಯ್ಯೋ ಶಿವನೆ, ನೀವ್‌ಗಳ್‌ಂದಾದ ತಪ್ಪ್‌ಗೆ ಮೈಮೇಲೆ ಬರ್ವ ದೇವ್ರೂ ಎಂಥ ಹೇಳ್ದು? ನೀವ್ ಹೊಳೆಕರೆಲಿ ಮನೆಕಟ್ಟದಿದ್ದರೆ ಹಿಂಗೆಲ್ಲ ಆಕ್ತಿತ್ಲೆ. ಮನೆಲೇ ದೇವ್ರೂನ ಭಕ್ತಿಂದ ಬೇಡ್, ದೇವ್ರು ನಿನ್ನ ಕೈ ಬುಡಿಕಿಲೆ, ಎಲ್ಲಾ ಸರಿಯಾದೆ"ತ ಭಾಗ್ಯಮ್ಮ ಹೇಳ್ತ್.

ಸಾಲದವರ ಹಕ್ಕಲೆ ತಾನೇ ನಿತ್ತ್ ಸಮೆ ಕೇಳ್ತ್ ಭಾಗ್ಯಮ್ಮ. ಯಾಕೆ ಇದೆಲ್ಲಾ ತಲೆಬೇನೆ ಕೆಲ್ಸತ ಹೇಳ್ದ ಗಂಡನ ಬಾಯಿ ಮುಚ್ಸಿತ್. ಇದ್ದ ಹಂಙ ಜಾಗಲಿ ಹೊಸದಾಗಿ ಕೃಷಿ, ಹಸ್, ಕೋಳಿ, ಜೇನ್ ಸಾಂಕಿಕೆ ಮಾಹಿತಿ ಕೊಟ್ಟತ್.

ಹಂಗಾರೇ ದುಡ್ಡು... ಬೇಕಲ್ಲಾ .......?

ಎಲ್ಲಾ ಕಡೆಲಿ ಸಾಲಂದಾಗಿ ಯಾರು ಸಾಲ ಕೊಡ್ತಿತ್ಲೆ. ಕಡೆಗೆ ತನ್ನ ಹತ್ರ ಇರ್ದ ಐದ್ ಹಸ್‌ಲಿ ಎರಡ್ ಹಸ್‌ಗಳ್ನ, ಸ್ವಲ್ಪ ಕೋಳಿ ಮರಿಗಳನ್ನ ಭಾಗ್ಯಮ್ಮ ಕೊಟ್ಟತ್. ಕಾಡ್‌ಂದ ಜೇನ್ ಕುಡಿ ತಂದ್ ಹೆಂಗಾರ್ ಬದ್ಕಿಕಣಲಿತ ಮನ್ಸ್‌ಲಿನೇ ಗ್ಯಾನಮಾಡಿ ಶಿವಪ್ಪ ಕೊಟ್ಟತ್. ಓಂಗೆ ಭಾಗ್ಯಮ್ಮ ಶಿವಪ್ಪ ದಂಪತಿಗ ಒಂದಲ್ಲ ಒಂದ್ ಸಹಾಯ ಮಾಡ್ತಿದ್ದೋ.

ಹಂಙಾ ಸಮೇಲಿ ಹಾಲ್‌ಕೊಡ್ವ ಹಸ್‌ಂದಾಗಿ ಕೈಲಿ ದುಡ್ಡು ನಿಲ್ಲುವಂಗಾತ್. ಶಿವಪ್ಪ ನಂಜಮ್ಮನ ಗಂಡನ ಗುರುತ್ ಮಾಡಿ ಮನೆಗೆ ಕರ್ಕಂಡ್ ಬಾತ್. ಮನೆ ಮನೆಗೆ ಹಾಲ್ ಹಾಕ್ತಿದ್ದೊ. ಮಕ್ಕಳ ಮನ್ಸ್‌ಲಿ ಖುಷಿ, ಹೊಸ ಬಟ್ಟೆ, ಹಾಲ್, ತುಪ್ಪ, ಬೆಣ್ಣೆ, ಮಜ್ಜಿಗೆ ಎಲ್ಲಾ ಇತ್ತ್. ಜೊತೆಲಿ ಇನ್ನೆರಡ್ ಹಸ್‌ಗಳನ್ನ ತಕಂತ್ ನಂಜಮ್ಮ. ಕೋಳಿ ಮೊಟ್ಟೆ, ಜೇನ್ ವ್ಯಾಪಾರ ಮಾಡ್ತಿತ್. ಸುರು ಸತಿ ಕರ್ದ ಹಾಲ್‌ನ ಕೆಲ್ಸಕೆ ದಾರಿದೀಪಾದ ಭಾಗ್ಯಮ್ಮಂಗೆ ತಂದ್ ಕೊಟ್ಟ್ ನೀವ್ಗೆ ಹಾಲ್‌ಗೆ ದುಡ್ಡಿಲ್ಲೆತ ಹೇಳ್ತ್ ಹೊಳೆಕರೆ ನಂಜಮ್ಮ. ವ್ಯಾಪಾರ ಬೇರೆ, ಗೆಳೆತನ ಬೇರೆ ಲೆಕ್ಕಕೆ ದು:ಖ ಇಲ್ಲೆ. ದುಡ್ಡು ತಕ ಮುಲಾಜ್ ಬೇಡ ಸಾಲ ಮುಗ್ಸಿ ಮಕ್ಕಳ್ನ ಲಾಯಕ ಓದ್ಸುತ ಹೇಳ್ತ್ ಭಾಗ್ಯಮ್ಮ.

ಸುರೂಗೆ ಭಾಗ್ಯಮ್ಮನ ಮನೆಗೆ ಹಾಲ್ ಕೊಟ್ಟ್ ಬೇರೆಯವುಕೆ ಕೊಡ್ತಿತ್ ನಂಜಮ್ಮ. ಕಾಲ ಹೋದಂಗೆ ಅವ್ರ ಕಷ್ಟಗ ದೂರ ಆತ್. ನೆಂಟ್ರ್‌ಗ ಬಂದ್ ಹೋದುತ ಮಾಡ್ತಿದ್ದೊ. "ಏನೋ ಪಾಪ ಕೆಟ್ಟ ಘಳಿಗೆ, ದೇವ್ರೂ ಕೈ ಬುಟ್ಟತ್ಲೆತ" ಹೇಳ್ವ ನೆರೆಕರೆಯವರ ಮಾತ್‌ಗ.

ನೀವೇ ನನ್ನ ಪಾಲ್ನ ದೇವ್ರುತ ಹೇಳ್ತಿದ್ದ ನಂಜಮ್ಮನ ಬಾಯಿಲಿ ಈಗೀಗ ದೇವ್ರು ಕಣ್ಣ್ ಬುಟ್ಟತ್ತಲ್ಲತೇಳ್ವ ಮಾತ್‌ಗ ಬಾಕೆ ಸುರಾತ್. ದಿನಕೊಮ್ಮೆ ಭಾಗ್ಯಮ್ಮನ ಮನೆಗೆ ಹೋಗಿ ಬರ್ತಿದ್ದವುಳು ಮಕ್ಕಳ ಕೈಲಿ ಹಾಲ್ ಕೊಡಿಕೆ ಸುರ್ ಮಾಡ್ತ್. ಇನ್ನ್ ದಿನಕಳ್ದಂಗೆ ಯಾರ್ಯಾರೋ ಕೈಲಿ ಹಾಲ್ ಕೊಟ್ಟ್ ಕಳ್ಸ್‌ತಿತ್ತ್. ಇದ್ಕೆಲ್ಲ ಕಾರಣ ಒಂದೇ, ನಂಜಮ್ಮಂಗೆ ಪುರ್ಸೊತೇ ಇಲ್ಲೇತೇಳ್ದೊಂದೆ. ದಿನಕಳ್ದಂಗೆ ನಂಜಮ್ಮಂಗೆ ಬಡ್ಡಿ ಬಂಗಾರಮ್ಮನ ಜೊತೆಲಿ ಸ್ನೇಹ ಹೆಚ್ಚಾತ್. ಹೆಂಗಾರ್ ಇರ್ಲಿ. ಆದರೆ ಲಾಯ್ಕ ಇರ್ಲಿ ಭಾಗ್ಯಮ್ಮ ಶುಭ ಹಾರೈಸಿತ್.

ತುಂಬಾ ದಿನಗಳ್‌ಂದ ಕಾಂಬಕ್ಕೆ ಸಿಗದ ನಂಜಮ್ಮನ, ಒಮ್ಮೆ ನಾ ಮಾತಾಡ್ಸಿಕಂಡ್ ಬನ್ನೆತ ಭಾಗ್ಯಮ್ಮ ಮನೆಗೆ ಹೋತು. ಭಾಗ್ಯಮ್ಮನ ನೋಡಿ ಮುಖ ಕೆಂಬಡೆಕಾಯಿತರ ಮಾಡಿಕಂಡ್ ಬಾಗ್‌ಲ್‌ಲಿನೇ ನಿತ್ತ್ ಮಾತಾಡ್ಸಿ ಕಳ್ಸಿತ್ ನಂಜಮ್ಮ. ಮಂಸರ್ಲಿ ಇಷ್ಟೊಂದು ಬದ್ಲಾವಣೆ ಇಷ್ಟ್ ಬೇಗ ಸಾಧ್ಯನಾ ? ಛೇ...ಯಾಕೆ ಓಂಗಾತ್, ಹಕ್ಕಲೇ ಇದ್ದ ತಾನ್ ಕೊಟ್ಟ ಗುಬ್ಬಿ, ಸೀತೆ ಹಸ್ ಬಾಲ ಅಲ್ಲಾಡ್ಸಿ ತನ್ನ ಗುರ್ತುನ ಹೇಳಿಕಂಡತ್.

ಸಾಲಕ್ಕಾಗಿ ಹೆದ್ರಿಕಂಡಿದ್ದ ನಂಜಮ್ಮ, ಬಡ್ಡಿ ಬಂಗಾರಮ್ಮನ ಕಂಡರೆ ಮನೆಂದನೇ ಹೊರಗೆ ಬರ್ತ್ತಿಲ್ಲೆ. ಈಗ ... ನೋಡ್ರೆ ಇವುಳು ತುಂಬಾನೇ ಬದ್ಲಾಗುಟು.

"ಅಲ್ಪಂಗೆ ಐಶ್ವರ್ಯ ಬಾಕನ ಅರ್ಧರಾತ್ರಿಲಿ ಕೊಡೆ ಓಡ್ದವೆ ಗಡ". ಈ ಗಾದೆ ಭಾಗ್ಯಮ್ಮಂಗೆ ನಿಜ ಆತ್. ಯಾಗೋಳು ಗಟ್ಟಿ ಹಾಲ್ ಮನೆಗೆ ಬರ್ತಿತ್, ದಿನ ಕಳ್ದಂಗೆ ಹಾಲ್ ಬದ್ಲು ನೀರೇ ಜಾಸ್ತಿ ಇರ್ತಿತ್. ಇನ್ನೂ ದಿನ ಕಳ್ದಂಗೆ ಹಾಲ್ ಕಳ್ಸುದೇ

ನಿತ್ತೇಹೋತು.

ಇದರ ಬಗ್ಗೆ ನಂಜಮ್ಮನ ಹಕ್ಕಲೆ ವಿಚಾರ್ಸಿಕಾಕನ ಮಾಮೂಲಿಕೊಡವುಕೇ ಹಾಲ್ ಕಮ್ಮಿತೇಳ್ವ ಉತ್ತರ ಬಾತ್. ಈ ಮಾತ್ನ ಕೇಳ್ದ ಮೇಲೆ ಛೇ...ಯಾಕೆ ಹಿಂಗಾತ್ತ? ಭಾಗ್ಯಮ್ಮಂಗೆ ತುಂಬಾ ಬೇಜರ ಆತ್. ನಂಜಮ್ಮ ಯಾಕೆ ಇಷ್ಟ್ ಬೇಗ ಬದ್ಲಾತ್ತೇಳ್ದೇ ಗೊತ್ತಾಗದೇ ಹೋತು ಭಾಗ್ಯಮ್ಮಂಗೆ.

ಎರಡ್ ದಿನ ಕಳ್ದಂಗೆ ಪೇಟೆಗೆ ಜೊತೆಲಿ ಹೋಕೆ ಎದ್ರುಮನೆ ಕುಸುಮಕ್ಕ ಬಾತ್. ತನ್ನ ಮನ್ಸ್‌ಲಿದ್ದ ಬೇಜರನ ಹೇಳ್ತ್ ಭಾಗ್ಯಮ್ಮ.

ನೋಡ್ ಭಾಗ್ಯಮ್ಮ ಈ ಕಾಲಲಿ ಉಪಕಾರ ಮಾಡ್ದವರ್ನ ಗ್ಯಾನನೇ ಇಟ್ಕಂಬಲೆ. ನೀನ್ ಅಷ್ಟೊಂದ್ ಸಹಾಯ ಮಾಡ್ದ ಆ ನಂಜಮ್ಮಂಗೆ. ಅವುಳು ಅದರ್ನೆಲ್ಲ ಮರ್ತೆಹೋಗುಟು. ವಿಶ್ಯ ಗೊತ್ತಾತ ನಿಂಗೆ? ನಂಜಮ್ಮ ಆ ಬಡ್ಡಿ ಬಂಗಾರಮ್ಮನು ಯಾವುದೋ ಮಾಟಗಾರನಕ್ಕಲೆ ಹೋಗಿದ್ದೋ ಗಡ. ನಿಂಗೆ ಸಹಾಯ ಮಾಡ್ದವೇ ಮಾಟ ಮಾಡ್ಸಿಯೊಳೋತ ಹೇಳ್ತ್ ಗಡ. ಅದನ್ನ ನಂಬಿಕಂಡ್ ನಿನ್ನ ಹಕ್ಕಲೆ ಸುಳಿತ್ತಿಲ್ಲೆ ಗಡ. ಇಂತವರ್ನೆಲ್ಲ ದೇವ್ರು ಮೆಚ್ಚುದಾ, ಕುಸುಮಕ್ಕ ಹೇಳ್ದ ಮಾತ್ ಕೇಳಿ ಭೂಕಂಪಾನೇ ಆದಂಗೆ ಆತ್ ಭಾಗ್ಯಮ್ಮಂಗೆ.

ನಾವ್ಗಳ ಜೀವನಲಿ ಹಂಞ ಜನಗ ಕೊಡುಗೆಯಾಗಿ ಬಂದರೆ, ಇನ್ನ್ ಹಂಞ ಜನಗ ಪಾಠವಾಗಿ ಬಂದವೇತೇಳ್ವ ಮಾತ್ ನಿಜಾತ್ ಭಾಗ್ಯಮ್ಮಂಗೆ.
ಪೇಟೆಲಿ ಟೈಲರ್ ಕೆಲ್ಸ ಮುಗ್ಸಿ ರಾತ್ರಿ ಗಂಡ ಮನೆಗೆ ಬಾಕನ ವಿಶ್ಯ ತಿಳ್ಸಿತ್. ಶಿವಪ್ಪ ತುಂಬಾ ಸಮಾಧಾನ ಮಾಡ್ತ್. ನೀನ್ ಏನ್ ತಲೆಕೆಡ್ಸಿಕಂಬಡ ಭಾಗ್ಯ, ನೀನ್ ಏನ್ ತಪ್ಪು ಮಾಡ್‌ತ್‌ಲೆ ತಾನೆ? ದೇವ್ರು ನಮ್ಮ ಕೈಬುಡಿಕಿಲೆತ ಹೇಳ್ತ್. ಹಿಂಗೆ ಮಾತಾಡಿ ಮನೆವೆಲ್ಲಾ ಊಟ ಮಾಡಿ ಮಲ್ಗಿದೊ.

ಹೊತರೆ ಭಾಗ್ಯಮ್ಮಂಗೆ ನೆರೆಕರೆಯವರ ಬಾಯಿಂದ ಸುದ್ದಿ ಪೇಪರ್ಲಿ ತಿಳ್ದ ಛೇ... ನಂಜಮ್ಮಂಗೆ ಯಾಕೆ ಹಿಂಗಾತ್ತ ಆಶ್ಚರ್ಯ ಆತ್. ಜೊತೆಲಿ ಬೇಜರನೂ ಆತ್. ಮೊಟ್ಟೆಗೆ ಮೇಯಕ್ಕೆ ಹೊಡ್ಡಿದ್ದ ಹಸ್‌ಗಳ್ನೆಲ್ಲ ಹುಲಿ ಹಿಡ್ದುಟುಗಡ ......!

ರಾತ್ರಿ ತೋಟಕ್ಕೆ ಕಾಡಾನೆ ಬಂದ್ ಕೃಷಿನೆಲ್ಲಾ ಹಾಳ್ ಮಾಡಿಟ್ಟು ಗಡ ......!

✍ಪ್ರೇಮ ಬಿ.ಕೆ

ಕೋಂ: ಕೃಷ್ಣ
ನಂ 3, ಗೋವಿಪುರಂ ಗುಟ್ಟಳ್ಳಿ
ಕೆಂಪೇಗೌಡ ನಗರ
ಬೆಂಗಳೂರು 560019
ಮೊ ನಂ 9900195632

# ಅಮ್ಮನ ಹವ್ಯಾಸ

ಅಮ್ಮನ ರೂಮ್‌ಲಿ ಇನ್ನ್ ಲೈಟ್ ಹಾಂಗೇ ಉಟ್ಟು. ಮರ್ತ್ ಹಾಂಗೇ ಮಲ್ಗಳೋನೋ ಏನೋ ಗೊತ್ಲೆ. ನೋಡಿ ಬಾ ಅಂಜು... "ಇನ್ನ್ ಮಲ್ಗಿತ್ಲೇ, ಏನೋ ಬರಿತಾ ಒಳೋ. ಎಂತದ್ ಗೊತ್ಲೆ. ಅಷ್ಟೊಂದ್ ಬರ್ದವೆ. ಅಂದರೂ ಬರ್ದ್ ಕಳ್ಸಿದ ಯಾವ ಕತೆನೂ ಇದುವರ್ಗೆ ಪತ್ರಿಕೆಗಲ್ಲಿ ಬಂದದಂತೂ ನಾ ಕಂಡತ್ಲೆ. ಈಗ ಬಹುಶ: ಅವ್ರ ಆತ್ಮ ಚರಿತ್ರೆ ಬರಿತಾ ಒಳೋ ಏನೋ ಅನ್ಸಿದೆ...!"

ಅವ್ ಹೆಂಗಾರ್ ಅವರಿಷ್ಟಕೆ ಇರ್ಲಿ. ನಾವ್ ಮಲ್ಗನೋ... ನಾಳೆ ಬೇರೆ ಬೇಗ ಆಫೀಸ್‌ಗೆ ಹೋಕುತ ಅವು ರೂಮ್ ಹಕ್ಕಲೇ ನೋಡಿ ಬಂದ ಅಂಜು ಹೇಳ್ಯಾಕನ...... ಅಮ್ಮಂಗೆ ಈಗನೂ ಬರಿವ ಹವ್ಯಾಸ ಉಟ್ಟು. ಬರಿವ ಮನ್ಸ್‌ಗೆ ವಯಸ್ಸಾತ್ಲೆ, ಬರೀ ದೇಹಕ್ಕೆ ಮಾತ್ರ ವಯಸ್ಸಾಗುಟು. ಅಮ್ಮ ಹೇಳ್ದ ಮಾತ್ ನೆನ್ಪುಗೆ ಬಾತ್ ರಮೇಶಂಗೆ. ಕೆಲ ತಿಂಗಳ ಹಿಂದೆಯಷ್ಟೆ ಕಳ್ಸಿದ ಕತೆ ಏನಾತೋ ದೇವ್ರುರಿಗೆನೇ ಗೊತ್ತು .... ಪೋಸ್ಟ್‌ಲಿ ಎಲ್ಲಾರ್ ಕಳ್ದ್‌ಹೋತೊ ಏನೋ, ಅಲ್ಲರೇ ಆಫೀಸ್ ಕೆಲ್ಸದ ಬಿಜಿಲಿ ರೂಮ್ ಡ್ರಾವರ್‌ಲಿ ಎಲ್ಲರ್ ಇಟ್ಟ್‌ಬುಟ್ಟೆನೋ, ಏನೋ ಗೊತ್ಲೆ ...

ಸುಮ್ಮನಿರಿ, ನಿಮ್ಗೆ ಇಷ್ಟ್ ಮನಿ ಗೊತ್ತಾಲೆನ? ಈಗ ಕಾಲ ಬದ್ಲಾಗುಟು, ನಿಮ್ಮ ಅಮ್ಮನ ಕತೆನ ಯಾರ್ ಓದುವೆ? ನೀವ್ ಮನಿ ಹೇಳಿ... ರೊಮ್ಯಾಂಟಿಕ್ ಕತೆಗಳ ಆದರೆ ಎಲ್ಲವೂ ಎಷ್ಟ್ ಸಲ ಬೇಕರೆ ಓದುವೆ.

ಇನ್ನ್ ಅವ್ ಆ ಹಳೇ ಕಾಲಲೇ ಒಳೋ... ಈಗೆಲ್ಲಾ ಕಂಪ್ಯೂಟರ್ ಮೊಬೈಲ್‌ಗ ಬಂದ್ ಎಲ್ಲಾ ಕತೆಗ ಸಿಷ್ಟಮ್‌ಲೇ ಸಿಕ್ಕಿದೆ. ಮನೆಲೇ ಕುದ್ದ್ ನೆಟ್ ಪ್ಯಾಕ್ ಹಾಕ್ಸಿರೆ ಇಲ್ಲರೆ ಈಗೆಲ್ಲ ಜಿಯೋ ಸಿಮ್‌ಂತ ಬಂದ್ ಇಂಟರ್ ನೆಟ್ ಎಲ್ಲಾ ಫ್ರೀ .... ಎಲ್ಲಾ ಕತೆಗ ಕುದ್ದಲ್ಲೇ ಓದಿಕೆ ಸಿಕ್ಕಿದೆ. ಬರ್ದ್ ಇಲ್ಲರೇ, ಟೈಪ್ ಮಾಡಿನೋ ಇಲ್ಲರೆ ಸ್ಕ್ಯಾನ್ ಮಾಡಿನೋ, ಮೇಲ್ ಮಾಡಿನೋ ಕತೆನ ಸಂಪಾದಕನ ಕಣ್ಣ್ ಹಕ್ಕಲೇ ಕಾಣ್‌ವಷ್ಟ್ ಸುಲಭಂದ ಬರೆಯವು ಕಳ್ಸುವೆ ಗೊತ್ತ...

ಇವ್ ನೋಡ್ರೆ ಕೈಂದ ಬರ್ದ್, ಅಕ್ಷರನೂ ವಯಸ್ಸಾಗಿ ಅಕ್ಷರನೂ ಸರಿ ಕಾಂಬಲೆ... ನಿಮ್ಮ ಅಮ್ಮ ಈಗ ಹಂಗೆನೋಡ್ರೆ 25ರ ಗೂಡೆ ಅಲ್ಲ. 75ರ ಅಜ್ಜಿ ಆಗುಟು. ಅಜ್ಜಿ ಬರ್ದ ಕತೆ ಓದಿಕೆ ಯಾರಿಗೆ ಇಂಟ್ರಸ್ಟ್ ಉಟ್ಟು ನೀವೆ ಹೇಳಿ? ನೀವ್ ಚಿಂತೆ ಮಾಡ್ದು ಬುಟ್ಟ್ ನೆಮ್ಮದಿಲಿ ಮಲ್ಗಿ. ಹೊತಾರೆ ಬೇಕಾರೆ ಅಮ್ಮನ ಹಕ್ಕಲೇ ವಿಚಾರ್ಸಿ ನೋಡಿ. ಸಣ್ಣದಾಗಿ ಭಾಷಣ ಕೊಟ್ಟ್, ಮುಖಕ್ಕೆ ಕ್ರೀಮ್ ಹಾಕಿ, ಫ್ಯಾನ್ ಬಟನ್ ಒತ್ತಿ ತಿರ್ಗಿ ಮಲ್ಗಿ ಬುಟ್ಟತ್ ಅಂಜು ...

ರಮೇಶಂಗೆ ಹೆಂಗೆ ತಿರ್ಗಿ ಮಲ್ಗಿರೂ ತುಂಬಾ ಸಮೆ ನಿದ್ದೆ ಬಾತ್ಲೆ. ಮನೆ ಕೆಲ್ಸ ಮಾಡಿ ಉಳ್ದ ಸಮೆಲಿ ಅಮ್ಮ ದೇವರ ಭಜನೆ, ಸ್ತೋತ್ರ ಬುಕ್ಕ್‌ಗಳ್ನ ಓದುವೆ. ಹಂಗೆ ಸಣ್ಣ, ಸಣ್ಣ ಪೋರ್ಲುನ ಕಥೆ, ಕವನಗಳ್ನ ಬರ್ದವೆ. ಒಂದೆರಡ್ ಸತಿ ಅಮ್ಮಂಗೆ ಮೈಗೆ ಉಷಾರಿಲ್ಲದಿರ್ಕನ ನಾನೇ ದಿನಪತ್ರಿಕೆಗೆ ವಾರಪತ್ರಿಕೆಗೆ ಕತೆ, ಕವನಗಳ್ನ ಪೋಸ್ಟ್ ಮಾಡ್ದ್ ಉಟ್ಟು...

ಕೆಲವೊಂದ್ಸತಿ ಮರ್ತ್ ಆಫೀಸ್‌ಲೋ ಅಲ್ಲರೆ ರೂಮ್ ಡ್ರಾವರ್‌ಲಿ ಕತೆಗಳ್ನ

ಇಸಿ ಸ್ಪರ್ಧೆ ದಿನ ಕಳ್ದೋಗಿ ಇನ್ನ್ ಏನ್ ಪ್ರಯೋಜನ ಇಲ್ಲೇತೇಳಿ ಹೆಣ್ಣ್‌ನ ಮಾತ್ ಕೇಳಿ ಹರ್ದ್ ಹಾಕಿದ ಫಜೀತಿನೂ ಉಟ್ಟು. **ಅಂದರೂ ಅಮ್ಮ ಯಾಗನೂ ನಿರಾಶೆ ಪಟ್ಟತ್ಲೆ... ಕತೆ ಓದವುಕೆ ಬರ್ದವು ಯೌವ್ವನದವೋ, ವಯಸ್ಸಾದವೊತ ಹೆಂಗೆ ಗೊತ್ತಾದೆ...!**

ಮುಖ್ಯಾಗಿ ಕತೆನ ಓದಿಕಂಡ್ ಹೋಕಷ್ಟೆ ... ಓದವುಕೆ ಬೋರ್‌ತ ಅನ್ಸಿಕಾಗದ್‌ತ ಅಮ್ಮ ಆಗಾಗ ಹೇಳ್ತಿದ್ದದ್. ಅಮ್ಮನ ಮುಖಲಿ ಉತ್ಸಾಹತೇಳ್ದು ಹಂಗೇ ಎದ್ದ್ ಕಂಡದೆ. ತಲೆಲಿ ಒಳ್ಳ ಒಳ್ಳ ವಿಶ್ಯಗ ಹೆಂಗೆ ಹೊಳ್ದದೆತ ನಂಗೆ ಆಶ್ಚರ್ಯ ಆದೆ. ಹಂಗೆ ಗ್ಯಾನ ಮಾಡ್ತ ಮಾಡ್ತ ಯಾಗ ನಿದ್ದೆ ಬಾತ್‌ತ ಗೊತ್ತೆ ಆತ್ಲೆ...

ಅವ್ವ ನೋಡ್ ಈ ಸತಿ ದಸರಾ ವಿಶೇಷಾಂಕ ಬಂದುಟು ಅಂದರೆ.... ನೀ ಬರ್ದ ಕತೆ ಎಲ್ಲಿನೂ ಬಾತ್ಲೆತ ಪೊಪ್ಪ ಹೇಳ್ತಾ ಇದ್ದೊ. ನೀ ಯಾರ ಕತೆ ಬರ್ದಿಯ ಅವ್ವ...? ನಂಗೆ ಹೇಳಿಯಲ್ಲ ರಾಮ-ಲಕ್ಷ್ಮಣ, ಸೀತೆ, ಹನುಮ, ಲವಕುಶ, ಅಕ್ಬರ್ ಬೀರಬಲ್ಲ್ ...ಯಾರ ಕತೆ, ಬರ್ದ್ ಕಳ್ಸಿದ ನೀ.......? ಪಿಳ್ಳಿ ರಿಕ್ಕಿನ ಮಾತ್ ಕೇಳಿ ಸುನಂದಮ್ಮಂಗೆ ನಗೆ ತಡಿಯಾಕಾತ್ಲೆ......

ಇರ್ಲಿ ಬುಡ್ ...ಕೂಸು, ಈ ಸತಿ ಬಾತ್ಲೆರೆ ಇನ್ನೊಂದ್ ಸತಿ ಗ್ಯಾರಂಟಿ ಬಂದೇ ಬಂದದೆತೇಳ್ವ ನಂಬಿಕೆ ನಂಗೆ ಉಟ್ಟು ....

ನಿಂಗೆ ನಾ ಹೇಳಿಕೊಡ್ವ ಯಾವ ಕತೆಗಳ್ನೂ ಬರಿಯಲೆ. ಅದೆಲ್ಲ ಪುರಾಣದ ಕಥೆಗ. ನಾ ಬರಿಯೊದು ನಮ್ಮಂಥ ಮನ್ಸರ ಜೀವನಲಿ ಆಗ್ವ ಕಷ್ಟ, ದು:ಖ, ಸುಖಗಳ್ನ ಸೇರ್ಸಿ ಕಥೆ ರೂಪಲಿ ಬರ್ದನೆ. ಬಹುಮಾನ ಸಿಕ್ಕಕುತ ನಾ ಕಥೆಗಳ್ನ ಕಳ್ಸುದುಲೆ ಕೂಸು... ಪ್ರಯತ್ನ ಮಾಡ್ದು ಅಷ್ಟೇ ನನ್ನ ಕೆಲ್ಸ, ಫಲ ಕೊಡ್ದು ದೇವ್ರ ಕೆಲ್ಸ. ನೋಡ್ ಕೂಸು ನೀ..ಇಸ್ಕೂಲ್ಲಿ ಫಸ್ಟ್ ಬಾಕೆ ಲಾಯಿಕ ಓದಿ ಅಭ್ಯಾಸ ಮಾಡಿಯ ತಾನೇ ? ಅಂದರೂ... ನಿಂಗೆ ಫಸ್ಟ್ ಬಾಕೆ ಕಷ್ಟ ಆದೆ. ಹಂಗೆತೇಳಿ ನೀ ಓದುದೇ ಇಲ್ಲೇತೇಳಿ ಇರ್ದುಲೆತಾನೆ...

ಎಲ್ಲ ಕಡೆಲಿ ಸ್ಪರ್ಧೆಗ ಇದ್ದದೆ. ನಾಳೆ ನೀ ಪೊಪ್ಪನ ಹಾಂಗೇ ಕಲ್ತ್ ಮುಂದೆ ಇಂಜಿನಿಯರೊ, ಡಾಕ್ಟರೋ, ದೊಡ್ಡ ಆಫೀಸರೊ ಆದಿಯ. ಆಗ ನಿಂಗೆ ಅನುಭವ ಆದೆ... ನಂಗೆ... ಕೂಸು ಇನಾಮುನ ಆಸೆ, ಏನಿಲ್ಲೇ... ನೀವ್ ಬರ್ದ ಕಥೆ ಪೊರ್ಲುರ್ ಆಗುಟ್ಟುತ ಓದಿದವು ಹೇಳ್ರೆ ಅದೇ ನನ್ನ ಇನಾಮು. ಅದೇ ನಂಗೆ ಸಮಾಧಾನ ಕೊಟ್ಟದೆ...

ಪಿಳ್ಳಿನ ಹಕ್ಕಲೆ ಒಂದೆರಡ್ ಮನ್ಸಿಗನ್ಸಿದ ಮಾತ್ ಹೇಳ್ತ್. "ಅವ್ವ ಇನ್ನೊಂದ್ ಸತಿ, ನೀ ಕತೆ ಬರಿಯಕನ ನನ್ನ ಹಕ್ಕಲೆ ಕೊಡ್. ನಾ ಇಸ್ಕೂಲ್‌ಗೆ ಹೋಕನ ಪೋಸ್ಟ್ ಆಫೀಸ್‌ಗೆ ಹೋಗಿ ಪೋಸ್ಟ್‌ಗೆ ಹಾಕಿನೆ ಸರಿನಾ..."

ಮನೆ ಕೆಲ್ಸಲಿ ಅಮ್ಮಂಗೆ ಹಂಞ ಸಹಾಯ ಮಾಡಿಕ್ಕಾಗಿ ರಮೇಶ ಇರ್ಸಿದ ಜಾನು ಗೂಡೆಗೆ, ಅವ್ವ ಪಿಳ್ಳಿನ ಮಾತ್ ಕೇಳ್ತ ಕೇಳ್ತ ನಗೆ ತಡಿಯಕ್ಕಾಗ್ತಿಲೆ...

ಪಾಪ ಅಮ್ಮ ಕತೆ ಬರ್ದ್ ಮಂಜನ ಹಕ್ಕಲೆ ಕೊಟ್ಟವೆ. ಅವ್ ನೋಡ್ರೆ ರೂಮ್‌ಲೆ ಕೆಲ್ಸದ ಬಿಜಿಲಿ ಬುಟ್ಟ್ ಹೋದವೆ ಸರಿಯಾದ ಸಮೆಗೆ ಪೋಷ್ಟ್‌ನೂ ಮಾಡ್ಲೆತ... ಮನ್ಸ್‌ಲೇ ಹೇಳಿಕಂಡ್ ನಿಟ್ಟುಸಿರ್ ಬುಟ್ಟತ್ ಜಾನುಗೂಡೆ.

ಈ ಸತಿ ದೀಪಾವಳಿ ವಿಶೇಷಾಂಕಕ್ಕಾಗಿ ಆರಿಸಿ ಬಂದ ಮೊದ್ಲ ಕಥೆಗೆ 10 ಸಾವಿರ ರೂಪಾಯಿ ಬಹುಮಾನತ ಪೇಪರ್ಲಿ ಸುನಂದಮ್ಮ ಓದಿಯೊಳೊ...

ರಮೇಶ ಮತ್ತೆ ಅಂಜು ಮದ್ವೆಯಾಗಿ ಈಗ ಬರ್‍ವ ತಿಂಗಳಿಗೆ 10 ವರ್ಷ ಆಕುಟ್ಟು, ಸಣ್ಣದಾಗಿ ಪಾರ್ಟಿ ಬೇರೆ ಮಾಡ್ಡೋತ ಹೇಳ್ತಿದ್ದೊ ... ಪಿಳ್ಳಿಗೆ ಒಂದ್ ಸಣ್ಣ ಮಟ್ಟಿಗೆ ಉಂಗುರನೋ ಇಲ್ಲರೆ ಚೈನ್‌ನೋ ಮಾಡಿಕೊಡನೊತ ಮನ್ಸ್ ಉಟ್ಟು ...

ಅಂದರೆ ಎಲ್ಲಕ್ಕೂ ಕಾಸ್ ಬೇಕ್. ದುಡ್ಡೆ ದೊಡ್ಡಪ್ಪ ... ವಿದ್ಯೆ ಅದರಪ್ಪ ...ತ ಹೇಳಿಕಂಡ್ ನಾ ಯಾಗನೂ ಹಣ ಬೇಕುತೇಳಿ ಕತೆ ಬರ್‍ದಿತ್ತೆ. ಈ ಸತಿ ಕಾಸ್‌ದ್ ಅಗತ್ಯ ಇದ್ದದ್ರಂದ ಕುಲದೇವ್ರು ತಿರುಪತಿ ವೆಂಕಟರಮಣನ ಮನ್ಸ್‌ಲೇ ಪ್ರಾರ್ಥನೆ ಮಾಡಿ ಕತೆ ಬರೆಕೆ ಸುರು ಮಾಡಿದ್ದೆ...

ಮನೆ ಕೆಲ್ಸ ಎಲ್ಲಾ ಮುಗ್ಸಿ ಸಿಕ್ಕಿದ ಸಮೆಲಿ... ರಾತ್ರಿ ಮನೆವೆಲ್ಲಾ ಮಲ್ಗಿದ್ದರೂ ಸುನಂದಮ್ಮ ಕತೆ ಬರೆತ್ತಿದ್ದೊ. ಆಫೀಸ್‌ಂದ ಬಾಕನ ರಮೇಶ ಪೋರ್ಲುನ ಕಾಗದನ ತಂದ್ ಕೊಟ್ಟಿತ್. ಹಂಗಾಗಿ ಈ ಸತಿ 2 ದಿನಲಿ ಹತ್ತ್ ಪುಟಗಳ ಪೋರ್ಲುನ ಕತೆ ಬರ್‍ದ್ ಮುಗ್ಸಿದೆ. ನಾನೇ ಪೋಸ್ಟ್ ಆಫೀಸ್‌ಗೆ ಹೋಗಿ ಕಥೆ ಪೋಸ್ಟ್ ಮಾಡಿಕೆ ಆಗದ್ರಂದ ಮಂಜನ ಕೈಗೆನೆ ಕೊಡ್ದು ಒಳ್ಳೆದ್‌ತೇಳಿ... ನೆನ್ಪುಲಿ ಸಮೆಗೆ ಸೆರಿಯಾಗಿ ತಲ್ಪುವಂಗೆ ಪೋಸ್ಟ್ ಮಾಡ್ ಮಂಞತ... ಹೇಳಿ ಕೊಟ್ಟತ್ತ್ ಸುನಂದಮ್ಮ.

ಆಫೀಸ್ ಕೆಲ್ಸ.... ತುಂಬಾ ಬಿಜಿಲಿ ಇದ್ದದ್ರಂದ ನಾಳೆ ಪೋಸ್ಟ್ ಮಾಡ್ಡೋತೇಳಿ ರೂಮ್ ಡ್ರಾವರ್‍ಲಿ ಇಸಿತ್ ರಮೇಶ.

"ಸುನಂದಮ್ಮ ... ಹಲೋ ... ಹಲೋ ... ಯಾರ್ ಮಾತಾಡ್ದುತೇಳಿ.. ಗೊತ್ತಾತಾ?. ನಾ ಮಡಿಕೇರಿಂದ ನಿಮ್ಮ ಅಭಿಮಾನಿ ಭಾಗ್ಯಮ್ಮ, ನೀವ್ ಬರ್‍ದ ಕತೆ ದೀಪಾವಳಿ ವಿಶೇಷಾಂಕಲಿ ಬಂದುಟ್ಟು. ನಾ ಓದಿ ನೋಡ್ದೆ ಪೋರ್ಲು ಉಟ್ಟು. 2ನೇ ಇನಾಮು ಸಿಕ್ಕುಟ್ಟು ಅಭಿನಂದನೆಗ. ಹಂಗೆ ಸುರುನ ಇನಾಮು ಬಂದ ಕತೆಗಿಂತ ನೀವ್ ಬರ್‍ದ "ವೀರಯೋಧ" ನಮ್ಮ ನೆಲ, ನಮ್ಮ ದೇಶಕ್ಕಾಗಿ ಹೋರಾಡಿ ಪ್ರಾಣ ಕೊಟ್ಟ ಕಥೆ ಪೋರ್ಲು ಉಟ್ಟು.. ಕಾಫಿ ಆತಾ?"

ಮನೆ ಹಕ್ಕಲೆ ಬಾಡಿಗೆ ಮನೆಲಿದ್ದ್ , ಈಗ ಮಡಿಕೇರಿಗೆ ವರ್ಗಾವಣೆಯಾದ ಭಾಗ್ಯಮ್ಮನ ಮಾತ್ ಕೇಳಿ ನಂಬಿಕಾತ್ಲೆ.

ಯಾರ ಪೋನ್ ? ರಮೇಶ, ಹೊರಗೆ ಬಂದವನೇ ಕೇಳ್ತ್. ಮಡಿಕೇರಿಂದ ಭಾಗ್ಯಮ್ಮ ಸುರಗೆ ಇಲ್ಲೆ ಹಕ್ಕಲೆ ಬಾಡಿಗೆ ಇದ್ದ್ ಈಗ ಮಡಿಕೇರಿಗೆ ಹೋದೊ ಅಲ ಅವೇ ...

ನಾ ನಿನ್ನಕ್ಕಲೆ ಸ್ಪರ್ಧೆಗೆ ಕಳ್ಸ್‌ತ ಕಥೆ ಪೋಸ್ಟ್‌ಗೆ ಕೊಟ್ಟೆ ತಾನೆ? ಅದ್ಕೆ 2ನೇ ಇನಾಮು ಬಂದುಟು ಗಡ! ಅದ್ಕೆ ಓದಿ ಲಾಯ್ಕ ಉಟ್ಟುತ್ತೇಳಿ ಪೋನ್ ಮಾಡ್ದ್ ...

"ಅಮ್ಮನ ಮುಖಲಿ ಯಾಗೋಳ್ ಇಲ್ಲದ ಖುಷಿ ಇಂದ್ ಎದ್ದ್ ಕಾಣ್ತುಟ್ಟು" ರಮೇಶ ಇದೆಲ್ಲ ಹೆಂಗಾತ್ ತ ನಿತ್ತಲ್ಲೇ ಒಂದ್ ನಿಮಿಷ ಹಾಂಗೇ ನಿತ್ತ್ ಬುಟ್ಟತ್..

ನಾ ಕತೆ ಪೋಸ್ಟ್ ಮಾಡ್ರೆತಾನೇ ಇನಾಮು ಸಿಕ್ಕದು ? ಪ್ರಕಟ ಆದು.. ಅಮ್ಮಂಗೆ ಯಾರೋ ಸಮಾಧಾನ ಮಾಡಿಕ್ಕಾಗಿ ಪೋನ್ ಮಾಡಿರೊಕು. ಅಲ್ಲರೆ ಅವ್ ಏನೋ ಹೇಳಿಕ್ಕೋಗಿ ಇನ್ನ್ ಏನಾರ್ ಕೇಳಿರೊಕುತ ಅನ್ಸಿದೆ. ಅದೇ ಕ್ಷಣಲಿ ರೂಮ್ ಗೆ ಹೋಗಿ ನಾ ಮರ್‍ತ್ ಎಲ್ಲಿ ಬುಟ್ಟೆತ ಹುಡ್ಕಿಕೆ ಸುರು ಮಾಡ್ತ್.

ಎರಡ್ ದಿನದ ಹಿಂದೆಯಷ್ಟೆ ಡ್ರಾವರಿಲಿಟ್ಟಿದ 50 ರೂಪಾಯಿ ಕಾಂಬತಿತ್ಲೆ

ಜಾನು ಗೂಡೆನ ಅಂಜು ವಿಚಾರ್ಸಿಕಾಕನ ರಮೇಶನೇ ಮುಂದೆ ನಿತ್ತ್ ....

"ಇರ್ಲಿ ಬುಡ್ ಅಂಜು. ನಮ್ಮ ರಿಕ್ಕಿ ಹೈದಮನಿ ಎಲ್ಲಾರ್ ನನ್ನ ಪರ್ಸ್‌ಂದ 10–20 ರೂಪಾಯಿನ ಆಗಾಗ ಪೆನ್ನ್‌ಗೆ, ಪೆನ್ಸಿಲ್‌ಗೆ ತಕಂತಿದ್ದದೆ ಅಲ ! ಹಂಗಾರ್ ತಕಂಡಿರೊಕು .. ನೀ ಯಾಕೆ ಈ ಗೂಡೆಗೆ ಬೈದಿಯತ ಹೇಳ್ದ ದೃಶ್ಯಗ ಕಣ್ಣಕ್ಕಲೇ ಬಂದಂಗೆ ನೆನ್ಪಾತ್ ..

ಅಂಜು ಮನೆಂದ ಆಫೀಸ್‌ಗೆ ಹೋದ ಮ್ಯಾಲೆ, ಆ ಕ್ಷಣನೇ ಜಾನು ಗೂಡೆನ ಹಕ್ಕಲೆ ರಮೇಶ ಹೋಗಿ "ಜಾನು .. ನಿನ್ನ ಹಕ್ಕಲೇ ಒಂದ್ ಮಾತ್ ಕೇಳ್ನೆ .. ಸತ್ಯ ಹೇಳೊಕು, ನೀನೆ ಡ್ರಾವರಿಲಿದ್ದ 50 ರೂಪಾಯಿ ತೆಗ್ದೊಳ ತಾನೇ .. ?

ಅವಳ್ನ 2 ಸತಿ ಕೇಳ್ರು ಉತ್ತರ ಸಿಕ್ತ್‌ಲೆ. ರಮೇಶ ಜೋರ್ ಸ್ವರಲಿ ಕೇಳಕನ ಮರ್ದಿಕೆ ಸುರು ಮಾಡಿ, "ಮಾವ ನಾ ನಿಜ ಹೇಳ್ನೆ .. ನಾ ಕಳ್ಳತನ ಮಾಡ್ತ್‌ಲೆ, ಆ ಕಾಸ್‌ನ ನಾ ಉಪಯೋಗ ಮಾಡ್ತ್ಲೆ."

ಅಮ್ಮ ಬರ್ದ್ ನಿಮ್ಮ ಹಕ್ಕಲೇ ಕೊಟ್ಟ ಕತೆ 2 ದಿನಂದ ರೂಮ್ ಡ್ರಾವರಿಲಿತ್ತ್. ನೀವ್ ಮರ್ತ್ ಪೋಸ್ಟ್ ಮಾಡ್‌ತ್ಲೆ. ಹಂಗಾಗಿ ನಾ 50 ರೂ ತಕಂಡ್ ಕತೆ ಪೋಸ್ಟ್ ಮಾಡ್ದೇ. ನಂಗೆ ಕ್ಷಮೆ ಇರ್ಲಿ. "ಮಾವ... ಅಂದರೆ ಅಮ್ಮಂಗೆ ಸ್ಪರ್ಧೆಲಿ ಸಿಕ್ಕಿದ ಇನಾಮುನ ಮುಂದೆ ನೀವ್ ಪೆಟ್ಟ್ ಕೊಟ್ರು ನಂಗೆ ಬೇಜಾರಿಲ್ಲೆ."

ಇಷ್ಟ್ ಸಣ್ಣ ಗೂಡೆನ ತಲೆಲಿ ಇಷ್ಟ್ ಪೊರ್ಲುನ ವಿಶ್ಯ. ಜಾನು ಗೂಡೆಗೆ ಈಗ 19 ವರ್ಷ. ಅಂದರೆ ನಂಗೆ 45 ದಾಟಿಟ್ಟು... ನನ್ನ ಅಮ್ಮನ ಖುಷಿಗಾಗಿ ನಾ ಏನ್ ಮಾಡ್ತ್ಲೆ. ಅಂದರೆ ಕೆಲ್ಸದ ಗೂಡೆಗೆ ಅಮ್ಮನ ಮನ್ಸ್ ಅರ್ಥ ಆಗುಟು. ಮಂಜನಾಗಿ ನಾ ಮಾಡದ ಕೆಲ್ಸನ ಈ ಗೂಡೆ ಮಾಡಿ ತೋರ್ಸಿಟು. ರಮೇಶ ಅಪರಾಧಿತರ ತಲೆ ಕೆಳಗಾಗಿ ವಾಪಸ್ಸ್ ಹೋತ್. ಮುಂದೆ ಈ ರೀತಿ ಆಕಾಗದ್‌ತ ಎಚ್ಚರಿಕೆ ಕೊಟ್ಟತ್.

"ಮಾವ.. ನಾ ಈ ವಿಷ್ಯನ ಯಾರ ಹಕ್ಕಲನೂ ಹೇಳ್ಲೆ. ಇಫ್ ಯು ಡೋಂಟ್ ಮೈಂಡ್, ಪ್ರಾಮೀಸ್."

ರಮೇಶ ತಿರ್ಗಿ ನೋಡಿ ಮತ್ತೆ ತನ್ನ ರೂಮ್ನ ಹಕ್ಕಲೆ ಹೋತ್, ಹೊರ್ಗೆ ಸುನಂದಮ್ಮ ಹಕ್ಕಲೆ ಮನೆನ ಬೇಬಿ, ರಾಧ, ಗೀತ, ವಸಂತಿ ಇವ್ರ ಹಕ್ಕಲೆನು ಹೇಳ್ತಾ ಉಟ್ಟ್. ನಮ್ಮ ರಮೇಶ ಪೋಸ್ಟ್‌ಲಿ, ಅದ್ ಸ್ಪೀಡ್ ಪೋಸ್ಟ್‌ಲಿ ಕಳ್ಸುಟ್ಟು ಇಲ್ಲದಿದ್ದರೆ ಸಮೆಗೆ ಸೆರಿಯಾಗಿ ಸ್ಪರ್ಧೆನ ತಾರೀಖುನು ಕಳೆವ ಮೊದ್ಲೆ ಕತೆ ತಲ್ಪ್‌ತ್ತಿತ್ಲೆ. ಒಂದ್ ಸಮೆ ಅಂವ ಕೊರಿಯರ್‌ಲಿನೂ ಕಳ್ಸಿರಕುತ ಅನ್ನಿದೆ..

ಇನ್ನ್ ಏನೇನೋ ಹೊಗಳ್ತ ಉಟ್ಟ್ ಅಮ್ಮ. ರಮೇಶ ಕೇಳಿನೂ ಕೇಳದಂಗೆ ಆ ಕಡೆ ನೋಡದೆ ತನ್ನ ರೂಮ್‌ನ ಒಳಗೆ ಹೋಗಿ ಮಲ್ಗಿ ಬುಟ್ಟತ್..

✍ ಕೊಕ್ಕಲೆ ಮಾಲಿನಿ ಮುತ್ತಪ್ಪ

ಅಪ್ಪಂಗಳ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು

# ಮಕ್ಕಳ ಕತೆ

## ರಾಜ–ರಾಣಿ

ಒಂದು ಊರುಲ್ಲಿ ರಾಜ ರಾಣಿ ಇದ್ದೊ. ರಾಜ ಒಂದ್ ಜಾತಿ ಹೆಣ್ಣ್ ನಾಯಿನ ಸಾಂಕಿ ಕಂಡಿತ್. ನಾಯಿನ ಹೆಸರ್ ಬಿಲ್ಲಿ. ರಾಜಂಗೆ ಮಕ್ಕ ಇತ್ತ್‌ಲೆ. ರಾಜನ ಹೆಣ್ಣ್ ಈಗ ತುಂಬಿದ ಬಸುರಿ. ರಾಜ ಸಾಂಕಿದ ಬಿಲ್ಲಿ ನಾಯಿ ಕೂಡ ತುಂಬಿದ ಬಸುರಿ. ರಾಣಿನೂ ಬಿಲ್ಲಿ ನಾಯಿನೂ ಒಂದೆ ದಿನ ಹೆತ್ತ್‌ಕಂಡೊ. ರಾಣಿ ಎಂಥ ಮಕ್ಕಳ ಹೆತ್ತದ್ ಗೊತ್ತಾ? ಎರಡ್ ಗಂಡ್ ನಾಯಿ ಮರಿಗಳ. ನಾಯಿ ಹೆತ್ತದ್ ರಾಣಿ ಎರಡ್ ಹೆಣ್ಣ್ ಮಕ್ಕಳ.

ರಾಣಿಗೆ ಬೇಜರಾಗಿ ನಾಚಿಕೆಂದ ಮುಖ ತೋರಿಸಿಕೆ ಆತ್‌ಲೆ. ರಾಣಿ ಒಂದು ಉಪಾಯ ಮಾಡ್ತ್. ಬಿಲ್ಲಿ ನಾಯಿ ಮಕ್ಕಳ ಬುಟ್ಟ್ ಆ ಕಡೆ ಈ ಕಡೆ ಹೋಕನ ರಾಣಿ ಮಕ್ಕಳ್ನ ಹತ್ರ ಹಾಕಂಡ್ ನಾಯಿ ಮಕ್ಕಳ ಬಿಲ್ಲಿ ನಾಯಿ ಮಲಗ್‌ವಲ್ಲಿ ಬುಡ್ತಿತ್ತ್. ಇದರ್ನ ಕಂಡ ಬಿಲ್ಲಿ ನಾಯಿ ರಾಣಿ ಇಲ್ಲದಿರಕನ ರಾಣಿ ಮಕ್ಕಳ್ನ ಕರ್‌ಕಂಡ್ ದೊಡ್ಡ ಕಾಡಿಗೆ ಹೋದೆ. ಅಲ್ಲಿ ಒಂದು ದೊಡ್ಡ ಬಂಡೆ ಕಲ್ಲು ಮನೆನಂಗೆ ಇತ್ತ್. ಬಿಲ್ಲಿ ನಾಯಿ ಎಂಥ ಮಾಡ್ತ್ ರಾಣಿ ಎರಡ್ ಹೆಣ್ಣ್ ಮಕ್ಕಳ್ನ ಬಂಡೆ ಕಲ್ಲ್ ಒಳಗೆ ಕರ್‌ಕಂಡ್ ಹೋಗಿ ಬುಟ್ಟತ್, ರಾಣಿ ಮಕ್ಕಳ್ಲಿ ಅಕ್ಕನ ಹೆಸ್ರ್ ಲಿಲ್ಲಿ, ತಂಗೆ ಹೆಸ್ರ್ ರೊಷಿ. ಬಂಡೆಕಲ್ಲ್ ಗುಹೆ ಒಳಗೆ ಅಷ್ಟ್ ಬಿಸಿಯಾಗಿ ಉಟ್ಟು, ದೊಡ್ಡ ರೂಂನಂಗೆ ಆಗಿ ಲಾಯ್ಕಾಗಿ ಉಟ್ಟು. ಮಕ್ಕಳಿಗೆ ಬಾರಿ ಖುಷಿ ಆತ್. ಬಿಲ್ಲಿ ನಾಯಿ ಎಂಥ ಮಾಡ್ತ್ ಮಕ್ಕಳ ಬುಟ್ಟ್ ಊರು ಒಳಗೆ ಮನೆಗೆ ಹೋತು. ಮಕ್ಕಳಿಗೆ ಊರು ಮನೆಗಳಿಂದ ಅನ್ನ ರೊಟ್ಟಿ ದೋಸೆ ಹಿಂಗೆ ಕದ್ದ್ ತಂದ್ ಕೊಡ್ತ್‌ತಿತ್ತ್. ಲಿಲ್ಲಿನು ರೊಷಿನು ದೊಡ್ಡವು ಆದೊ.

ರಾಣಿ ಹೆತ್ತ ಎರಡ್ ನಾಯಿ ಮರಿಗ ಬಾರಿ ಲಾಯ್ಕಾಗಿ ಒಳೊ. ರಾಣಿ ನಾಯಿ ಮರಿಗಳ್ನ ಹೆತ್ತುಟ್ಟುತ್ತ ಸದ್ಯ ಊರವ್ಕೆ ಯಾರಿಗೂ ಗೊತ್ತ್‌ಲೆ. ರಾಜನ ಬಿಲ್ಲಿ ನಾಯಿ ಜಾತಿ ಮರಿಗಳ ಹಾಕುಟುತ ಗೊತ್ತು.ಯಾರಿಗೆ ಬೇಕ್ ನಾಯಿ ಮರಿ ಬೇಕಾದವು ತಕಂಡ್ ಹೋಕ್ ತೇಳಿ ಬೋರ್ಡ್ ಹಾಕಿದೊ. ಬೊರ್ಡ್ ಓದಿ ಎರಡ್ ಜನ ನಾಯಿ ಮರಿ ತಾಕೆ ಹೋದೊ. ರಾಜನ ಕೆಲಸದೊವು ನಾಯಿ ಮರಿಗಳ ಹಿಡ್‌ಕಂಡ್ ಬಂದ್ ಎರಡ್ ಜನಕೆ ಕೊಟ್ಟೊ. ರಾಣಿಗೆ ತಡಿಯಲಾರದಷ್ಟ್ ಸಂತೋಷ ಆತ್. ಬಿಲ್ಲಿ ನಾಯಿ ರಾಣಿ ಮಕ್ಕಳ ಅವ್ವ ಒಳ್ಳೊಳ್ಳ ಊಟ ತಂದ್ ಕೊಡ್ತ್‌ತಿತ್ತ್. ಅಷ್ಟ್ ಹೊತ್ತಿಗೆ ಆ ಕಾಡಿಗೆ ರಾಜನ ಮಂಜಂದಿರ್ ಬೇಟೆಗೆ ಬಂದಳೊ. ರಾಣಿ ಗೂಡೆಗ ಬಂಡೆ ಕಲ್ಲ್ ಗುಹೆ ಒಳಗೆ ಆಟ ಆಡ್ತಿದ್ದೊ. ಇವರ ಮಾತ್ ಕೇಳಿ

ರಾಜ ಹೈದಂಗ ಬಂಡೆಕಲ್ಲ್ ಹತ್ರ ಬಂದೊ, ಲಿಲ್ಲಿನು ರೊಷಿನು ಅಷ್ಟ್ ಲಾಯ್ಕದ ಗೂಡೆಗ ಆಗೊಳ. ರಾಜನ ಹೈದಂಗ ಇಲ್ಲೆಂತಕೆ ಇರುದುತ್ತ ಕೇಳುವೆ. ನಾವು ತಬ್ಬಲಿ ಮಕ್ಕ ನಮಿಗೆ ಯಾರೂ ಇಲ್ಲೆ. ಅದಿಕೆ ಇಲ್ಲಿ ವಾಸ ಇರ್ದುತ ಹೇಳುವೆ ಗೂಡೆಗ. ರಾಜನ ಹೈದಂಗ ನಿಮ್ಮನ ಮದುವೆ ಮಾಡಿಕಂಡವೆತ ಹೇಳಿ ಗೂಡೆಗಳ ಕರ್‌ಕಂಡ್ ಹೋದವೆ. ಅರಮನೆಗೆ ಹೋಗಿ ಮದುವೆ ಮಾಡಿಕಂಡೊ, ಬಿಲ್ಲಿ ನಾಯಿ ಊರು ಒಳಗೆಂದ ಮಕ್ಕಳಿಗೆ ಊಟ ತಕಂಡ್ ಬಾತ್. ಬಾಕನ ಬಂಡೆಕಲ್ಲ್ ಗುಹೆ ಒಳಗೆ ಮಕ್ಕ ಕಾಂಬದುಲ್ಲೆ. ಬೇಸರ ಆತ್. ಬಿಲ್ಲಿನಾಯಿ ಅವ್ ಹೋದ ದಾರಿಲಿ ಮೂಸಿಕಂಡ್ ಹುಡ್ಕಿಕಂಡ್ ಹೋದೆ. ರಾಣಿ ಗೂಡೆಗ ಕರಿ ಮಣಿನ ಉದ್ದಕ್ಕು ಹಾಕಂಡ್ ಹೋಗೊಳೊ. ಬಿಲ್ಲಿ ನಾಯಿ ಅವ್ವ ಕರಿಮಣಿ ನೋಡಿಕಂಡ್ ಸಣ್ಣ ಮಗ ರೊಷಿನ ಮನೆಗೆ ಬಂದಂದೆ, ರೊಷಿ ತುಂಬಾ ಶ್ರೀಮಂತಿಕೆ ಇದ್ದವುಳು. ಗಂಡಂಗೆ ಅತ್ತೆ ಮಾಂವಂಗೆ ನನ್ನ ಅವ್ವ ನಾಯಿತ ಹೆಂಗೆ ಹೇಳುದುತ ನಾಚಿಕೆ ಆತ್. ಅನ್ನ ಒಲೆ ಮೇಲೆ ಕೊದಿ ಬರ್‌ತ ಉಟ್ಟು. ಗತಿಗೆಟ್ಟ ನಾಯಿ ಇಲ್ಲಿ ಯಾಕೆ ಬಂದದ್‌ತ ಹೇಳಿ ಮೈ ಮೇಲೆ ಕೊದಿ ಬರುವ ತಳಿನ ಹೊಯ್ದದೆ. ಮೈಯೆಲ್ಲ ಚಕ್ಕಳ ಜಾರ್‌ತ್. ಕಂಯ್ಯೊ ಕಂಯ್ಯೊತ ಹೇಳಿಕಂಡ್ ದೊಡ್ಡ ಮಗಳು ಲಿಲ್ಲಿ ಮನೆಗೆ ಹೋದೆ. ಲಿಲ್ಲಿ ನಾಯಿ ಅವ್ವನ ನೋಡಿ ಗೋಳಾಡದೆ ಗಂಡಂಗೆ ಅತ್ತೆ ಮಾಂವಂಗೆ ಹೇಳದೆ ಪಾಪದ ನಾಯಿ ಬಂದುಟುತ ಹೇಳಿ ಅವ್ವ ನಾಯಿಗೆ ಮದ್ದ್ ಹಾಕಿದೆ. ಅತ್ತೆ ಮಾಂವಂಗೆ ಗೊತ್ತಿಲ್ಲದೆ ಮಾಸದ ಊಟ ಮಾಡಿ ಕೊಟ್ಟದೆ. ದೊಡ್ಡ ಮಗ್ಳು ಲಿಲ್ಲಿ ಬಡವಳು. ಬಿಲ್ಲಿ ನಾಯಿ ಅವ್ವ ಸಣ್ಣ ಮಗ್ಳು ರೊಷಿ ಮೈ ಮೇಲೆ ತಳಿ ಹೊಯ್ದ್ ಚಕ್ಕಳ ಜಾರ್ಸಿದ ಸಿಟ್ಟಿಗೆ ಶಾಪ ಕೊಟ್ಟದೆ. ನಿನ್ನ ಶ್ರೀಮಂತಿಕೆ ಇಳ್‌ದ್ ಹೋಗಲಿ ಮನೆಮನೆ ಬಿಕ್ಷೆ ಎತ್ತಿ ಊಟ ಮಾಡ್‌ತ ಹೇಳಿ ಶಾಪ ಹಾಕಿತ್.

ಬಿಲ್ಲಿ ನಾಯಿ ದೊಡ್ಡ ಮಗ್ಳು ಲಿಲ್ಲಿಗೆ ಹೇಳ್ದೆ: ಮಗಳೆ ನನ್ನನ ಪೆಟ್ಟಿಗೆ ಒಳಗೆ ಹಾಕಿ ಇಸ್ 6 ತಿಂಗ ಬುಟ್ಟ್ ಪೆಟ್ಟಿಗೆ ಮುಚ್ಚಳ ತೆಗ್‌ದ್ ನೋಡ್‌ತ ಹೇಳಿ ಪ್ರಾಣ ಬುಟ್ಟತ್. ಬಿಲ್ಲಿ ನಾಯಿ ಹೇಳ್ದಂಗೆ ಲಿಲ್ಲಿ ಅವ್ವನ ಪೆಟ್ಟಿಗೆ ಒಳಗೆ ಹಾಕಿದೆ. ಬಿಲ್ಲಿ ನಾಯಿ ಶಾಪಂದ ಸಣ್ಣ ಮಗಳು ರೋಷಿ ದಿನ ದಿನ ಬಡವಳಾಕಂಡ್ ಬಾತ್. ಲಿಲ್ಲಿ ದೊಡ್ಡ ಮಗಳಿಗೆ ಬಿಲ್ಲಿ ನಾಯಿ ಅವ್ವನ ಪೆಟ್ಟಿಗೆ ಒಳಗೆ ಹಾಕಿದ್ ಗ್ಯಾನ್ ಬಾತ್. ಹೋಗಿ ಪೆಟ್ಟಿಗೆ ಮುಚ್ಚಳ ತೆಗೆದ್ ನೋಡ್ತ್. ಇಡಿ ನಾಯಿ ಅವ್ವನೆ ಚಿನ್ನದ ಗಟ್ಟಿ ಆಗುಟು. ಲಿಲ್ಲಿ ಮಗಳಿಗೆ ತಡಿಯಲಾರದಷ್ಟ್ ಸಂತೋಷ ಆತ್. ಅಕ್ಕ ಲಿಲ್ಲಿ ತುಂಬಾ ಶ್ರೀಮಂತಿಕೆ ಆತ್. ರೊಷಿ ಅಕ್ಕನ ಹೋಗಿ ಕೇಳ್ದೆ. ನೀನ್ ಹೆಂಗೆ ಶ್ರೀಮಂತಿಕೆ ಆದ್ ಹೇಳ್‌ತ. ಬಿಲ್ಲಿ ನಾಯಿ ಅವ್ವನ ಬಗ್ಗೆ ಎಲ್ಲಾ ಸಮಾಚಾರ ತಿಳ್ಸಿಕೊಟ್ಟದೆ. ಇದನ್ನ ಕೇಳ್ದ ರೊಷಿಗೆ ತಡಿಯಕಾಗದಷ್ಟ್ ದು:ಖ ಬಾತ್. ಬಿಲ್ಲಿ ನಾಯಿ ಅವ್ವನ ಶಾಪಂದ ರೊಷಿ ಸಣ್ಣ ಮಗಳು ಬಿಕ್ಷೆ ಎತ್ತಿ ತಿಂಬಕಾತ್.

ಇದಿಕೆ ಹೇಳ್‌ದು ಹೆತ್ತವ್ವ ನಾಯಿ ಆದರೂ ಮರೆಯಕೆ ಆಗದ್, ಹೆತ್ತವ್ವಂಗೆ ಬುಟ್ಟ ಮೇಲಾದ ದೇವುರು ಯಾರೂ ಇಲ್ಲೆ.

✍ಕಾಳೆಯಂಡ ತಂಗಮ್ಮ ಅಪ್ಪಚ್ಚ

ಬಿಳಿಗೇರಿ ಗ್ರಾಮ, ಮಡಿಕೇರಿ ತಾ॥



4

ಕವನ–ಕುಂಚದ

ಕವನ ಮಾಲೆ

# ಸಾಂತನ ಪಂಚೆ

ಸಂತೆಂದ ಬಂದ ಸಾಂತಪ್ಪಣ್ಣ
ಕೋಣದ ಹಿಂದೆ ಹೋತಿತ್ತ್
ಸಾಂತನ ಬೊಬ್ಬೆಗೆ ಕೇರೇ ಮಾಡದೆ
ಕೋಣ ಮುಂದೆ ಮುಂದೆ ಸಾಗಿತ್ತ್

ಎಲ್ಲಿಂದಲೋ ಬಂದ ಬೆಳ್ಳೆ ಕೊರ್ಂಗ್
ಕೋಣನ ಮೇಲೆ ಕುದ್ದಿತ್ತ್
ಉಳುಂಗು ಹೆರ್ಕಿ ಕೋಣನ ಬೆನ್ನ್‌ಲಿ
ಆನೆ ಸವಾರಿ ಮಾಡ್ತಿತ್ತ್

ಒಮ್ಮೆಗೆ ನೋಡಿಕೆ ಸಾಂತಂಗೆ ಕೊರ್ಂಗ್
ಕಳ್ಳನ ಕುಪ್ಪಿಂತಾಗೋತು
ಕೋಣನ ಬೆನ್ನ್‌ಲಿ ಕಳ್ಳ ಹೇಂಗೆಂತ
ಗೇನಮಾಡಿ ತಲೆ ಕೆಟ್ಟೋತು

ಹಕ್ಕಲೆ ಹೋಕನ ಅಲ್ಗಿತ್ ಮುಲ್ಲೆ
ಕೊರ್ಂಗ್‌ಂತೇಳ್ದು ಗೊತ್ತಾತ್
ಬಂದ ಕೋಪಕೆ ಬೀಸಿದ ಕೋಲುಗೆ
ಕೋಣದ ಬೆನ್ನ್‌ಲಿ ಬರೆಬೀತ್

ಸಡನ್ ಬಿದ್ದ ಸಾಯುವ ಪೆಟ್ಟ್‌ಗೆ
ಕೋಣಂತೇಳುದು ಕುದುರ್‍ಯಾತ್
ಚುಳ್ಳುವ ಕೋಣದ ಚೊಪ್ಪುನ ಬೊಳ್ಳಿ
ಸಾಂತನ ಪಂಚೆಗೆ ಸಿಕ್ಕೋತು

ಪಟ್ಟೆನೂಲುನ ಗಟ್ಟಿ ಕೋಮಣ
ಸಾಂತನ ಮಾನ ಕಾಪಾಡ್ತ್
ಬೆರಿಮ್ಮೆ ಸಾಂತನ ಕರಿ ಮೈ ನೋಡಿ
ಪಾರೆಕಲ್ಲಿಗೂ ನೆಗೆಬಾತ್

ಕೋಣಂಗ ಬಂದರು ಬಾರದ ಗಂಡನ
ಸೀತಮ್ಮ ಹುಡ್ಕಿಕೆ ಸುರುಮಾಡ್ತ್
ಮಯ ಮಯ ಬೊಳ್ಪುಲಿ ನಾಲಿಕೆನಾಂಗೆ
ಕೋಮಣ ಕಂಡ್ ಓಡ್ಯೋತು

ಹೆಣ್ಣ್‌ನ ಓಂದೆ ಬೆರಿ ಮೈ ಸಾಂತನು
ಎದ್ದ್ ಬಿದ್ದೋಡಿ ಮನೆ ಸೇರ್ತ್
ಗ್‌ಡ್ ಗ್‌ಡ್ ನಡುಗುವ ಹೆಣ್ಣ್‌ನ ನೋಡಿ
ದೇವರು ಬಂದುಟುಂತಾಗೋತು

ಚೊಂಬುಲಿ ನೀರ್ ಚಿಬುಳಿನ ದೀಪ
ಸಾಂತ ಗಡಿಬಿಡಲಿ ತಕಬಾತ್
ಕುರ್ದಿನೀರ್‌ಗೆ ಅಣ್ಣಣ-ಸುಣ್ಣ
ಹುಡ್ಕಿರು ಸಿಕ್ಕದೆ ಪೇಚಾಡ್ತ್.

ಸಾಂತನ ಬೊಬ್ಬೆಗೆ ಸುತ್ತುನ ಜೆನಗ
ನೆಳಗಳ ಹಾಂಗೆ ಸೇರ್‍ಯಾತ್
ಮಾತಾಡುದುಲೆ ನಡ್ಗಿದೆ ಹೆಂಗ್‌ಸ್
ತಲೆಗೊಂದೊಂದು ಮಾತಾತ್.

ಯಾರ್ ತಾಯಿ ನೀ ಯಾಕೆ ಬಂದೊಳಂತ
ಸಾಂತ ಕೇಳಿಕೆ ಸುರುಮಾಡ್ತ್
ದೆವ್ವ ನಂಗಲ್ಲ ಬುಡ್ಸಿನೆ ನಿಮ್ಮದ್
ಮಾಯ್ಪುನ ಸೂಡಿಗೆ ಕೈ ಹೋತು

ಕೋಣೆಂದ ಕೋಣೆಗೆ ಓಡುವ ಸಾಂತನ
ಓಟದ ಪಾಡ್ ಲಾಯ್ಕಿತ್ತ್
ಕೋಣನ ಬೊಳ್ಳಿಲಿ ನೇಲುವ ಪಂಚೆ
ಸಾವಿರ ಕಣ್ಣ್‌ಲಿ ನೋಡ್ತಿತ್ತ್.

✍ ಡಾ. ಕರುಣಾಕರ ನಿಡಿಂಜಿ.

ಪ್ರಾಧ್ಯಾಪಕರ್
ಎಫ್.ಎಂ.ಕೆ.ಎಂ.ಸಿ. ಕಾಲೇಜು
ಮಡಿಕೇರಿ

# ಚಾಂಪನ ಬಜನೆ

ಕತ್ತಲೆ ಹೊತ್ತ್‌ಗೆ ನಮ್ಮ ಚಾಂಪನ
ಬಜನೆ ಪೊರ್ಲುನ ಕೆಮಿಕೊಟ್ಟ್ ಕೇಳಿ

ದೀಪದ ಮುಂದೆ ಕೈ ಮುಗ್ದ್
ಹಣೆ ಮೇಲೆ ವಿಭೂತಿ ಬರೆ ಎಳ್ದ್
ಕಣ್ಣ್‌ನ ಮುಚ್ಚಿ ಕಾಲ್‌ನ ಮಡ್ಚಿ
ರಾಗಕೆ ಸರಿಯಾಗಿ ತಾಳ ಹಾಕಂಡ್
ಕಾಯಿನ ಒಡ್ದ್ ಜೊತೆಲಿಟ್ಟ್
ಹಣ್ಣ್ ಸುಲ್ದ್ ಬಾಳೆಲಿಟ್ಟ್
ಚಾಂಪನ ಬಜನೆ ಶುರು ಆಗ್‌ತಿತ್ತ್.

ಸುತ್ತ ಕುದ್ದ ಪಿಳ್ಳೆಕಗಿಳ್ಳಿಕ
ಒಬ್ಬನ ಒಬ್ಬ ಅಂಡ್‌ಸಿ ಅಂಡ್‌ಸಿ
ಕಿಸಿ ಕಿಸಿ ಪಿಸಿಪಿಸಿ ಮಾಡ್ತಿದ್ದೊ.

ಒಳಗೆ ಚಾಮೆವ್ವನ ಒಗ್ಗರಣೆ ಸದ್ದ್‌ಗೆ
ಚಾಂಪನ ಸದ್ದ್ ನಿತ್ತೇ ಹೋತ್.
ಚಾಮೆವ್ವನ ಕರ್ದ್ ಕೆಮಿಹತ್ರ ಕೇಳ್ದೊ
"ಏ... ಗಂಗಾ... ಕುಜ್ಜೆ ಗೈಪು ಆತಾ...?"

ಚಾಮೆವ್ವ ಜವಾಬು ಹೇಳಿಕೆ ಮುಂದೆ
ಬಜನೆಗೆ ಮಂಗಳ ಹಾಡ್ಯಾತ್
ಅಡಿಗೆ ಮನೆಗೆ ನೆಟ್ಟನೆ ನುಗ್ಯಾತ್
ಮಣೆ ಮೇಲೆ ಕುದ್ದ್ ಮುಕ್ಕಾಲ್ ಎಳ್ದ್
ಮುಕ್ಕಾಲ್ ತಲೆಗೆ ಅಡ್ಡಕೆ ಉದ್ದಕೆ
ತರಕಿಟ ತರಕಿಟ ತಟ್ಟ್‌ತ ಇದ್ದೊ.

✍ ಕುಲ್ಲಚನ ಕಾರ್ಯಪ್ಪ

## ಇಂತ ಖುಷಿನ ಸ್ವರ್ಗ ಸೀಮೆ ನಮಿಗೆ ಬೇರೆ ಎಲ್ಯುಟು?

'ರಾಮಲಕ್ಷ್ಮಣ'ನ ಹಟ್ಟಿಂದ ಹೊರ್ಡ್‌ಸಿ
ಅಪ್ಪ ಹೊರ್ಟತ್ ಗದ್ದೆಗೆ
'ಬೊಳ್ಪಾತ್‌ಲೆ ಇನ್ನೂ', ಬಿಸಾಕಿ ನಿದ್ರೆನ
ನಾನೂ ಹೊರ್ಟನೆ ಒಟ್ಟಿಗೆ!
    'ಹರ' 'ಹರ' 'ಹರ' ಹರ ಜಪಮಾಡಿ
    ಜೊತೆಗೇ ನಡೆವ ಕುಷಿಯೇನ್?
    ಎತ್ತ್‌ನ ಕೊರ್ಲ್‌ನ ಗಂಟೆನ ಶ್ರುತಿಗೆ
    ನಾ ಹಾಕುವ ಹೆಜ್ಜೆನ ಗತ್ತೇನ್?
ಒಟ್ಟಿಗೆ ಗಂಗೆ, ಗೌರಿ ಕಾಳಿನ ಅಟ್ಟಿಕಂಡ್
ನಾ ಅಪ್ಪನ ಹಿಂದೆ ಹಿಂದೆ
ಎತ್ತ್‌ಗಳೊಟ್ಟಿಗೆ ಮಾತಾಡ್ಕಂಡ್
ಅಪ್ಪ ಯಾಗೊಳು ಮುಂದೆ ಮುಂದೆ
    ಇಬ್ಬನಿ ಮೇಯ್ಸಿ ಗದ್ದೆನ ಹೂಡ್ತಾ
    ಬಂಗಾರದ ಬೆಳ್‌ಕ್‌ಲಿ ನೆಲದ ಷೋಕುನ ನೋಡ್ತಾ
    ಮಂಜ್‌ಲಿ ಮೀದ ಹೂಗಳ ಪೊರ್ಲುನ ಕಣ್ಣ್‌ಲಿ ಹೀರ್ತಾ
    ಆಹಾ! ಎಷ್ಟ್ ಲ್ಯಾಕ!
    ನಮಿಗಾಗಿ ತೆರೆವ ಹೊಸ ಲೋಕ
    ಇದ್ ಹಸ್ರ್ 'ಹೆಸ್ರ್' ನ ನಾಕ!
ಗದ್ದೆನ ತೋಡ್‌ಲಿ ಏನೆಲ್ಲ ಉಟ್ಟು
ಗೊತ್ತು ಬೆಳ್ಳಕ್ಕಿಗೆ ಇದ್ರ ಗುಟ್ಟು
ಹಾಡುವ ಹಕ್ಕಿನ ಪದಗಳ ಮೋಡಿ
ಮನ್ಸಿಗೆ ತಂದದೆ ಕುಸಿನ ಕೋಡಿ
    ಹೊತ್ತೇರ್ದಂಗೆ ನೆಪ್ಪಾದೆ ಶಾಲೆನ
    ಗುರು ಗುರು ಹೇಳ್ದೆ ಒಡಲ್‌ನ ಗುಮ್ಮ
    ಗಂಗೆನ ಗೌರಿನ ಗದ್‌ರಿಸಿ ಬೇಗ
    ಹೊಡ್ಕಂಡ್ ಬಂದಾತ್ ಹಟ್ಟಿಗೆ ಈಗ!
ಅವ್ವನ ಮಡ್ಡಿ ಹಟ್ಟಿನ ತಲ್ಪಿತ್
ಹಾಲ್‌ನ ಚೆಂಬ್‌ಲಿ ನೊರೆ ಬಾತ್
ಕಾಡಿ ಬೇಡಿ ಕುಡ್ದನೆ ಹಾಲ್
ನೊರೆ ಹಾಲ್‌ನ ರುಚಿಗೆ ಯಾವ್ದು ಮೇಲ್

ತಟ್ಟೆಲಿ ಬೀತ್ ರೊಟ್ಟಿ ಒಣ ಮೀನ್‌ನ ಸಾರ್
ಹಸ್ದ ಹೊಟ್ಟೆಗೆ ಅಮೃತಕು ಮೇಲ್
'ಬೇಡಾಂ'ತೇಳುವ ಮಾತೇ ಇಲ್ಲೆ
ಬಟ್ಟಲ್‌ಲಿ ಒಂಚೂರೂ ಉಳಿವಂಗಿಲ್ಲೆ
ರಜೆ ಬಾತೋ ಕಣ್ಣಿಕಿತ್ತ ದನ ನಾವು
ಊರು ಕಾಡು ಎಲ್ಲ ಹೊಡಿ ಹೊಡಿ !
ಜೇನ್ ಬೇಟೆ ಮೀನ್ ಬೇಟೆ
ಹೊಳೆ ಸ್ನಾನದ ಗಡಿಬಿಡಿ!
ಕುದುರೆನೂ ನಾವೇ ಮಾನಿನೂ ನಮ್ಮದೇ
ಎಲ್ಲರ ಮನೆ ಮಕ್ಕ ಒಂದೇ ಲೆಕ್ಕ
ಕೇಕೇ ಹಾಕಿ ನೀರ್‌ಲಿ ಆಡಿ
ಮರದ ಮೇಲೆ ನಮ್ಮ ಸವಾರಿ ಪಕ್ಕ!
ಹತ್ತುವೆ ಬೆಟ್ಟ ಇಲ್ಲವೆ ಕುಂದು
ಹತ್ತುವ ಭರಲಿ ನಮಿಗಿಲ್ಲೆ ಸೋಲು
ಕಾಡ್-ಮೇಡ್‌ನ ಹಕ್ಕೆಲ್ಲ ನಮ್ಮದೆ
ಮಾವು ನೇರಳೆ ಹಲಸೆಲ್ಲ ನಮಿಗೆ!
ಪುಂಡಾಟದ ಮಕ್ಕ ನಾವು
ಅದ್ಕೆ ನಾವು ಜಗ 'ಜಟ್ಟಿಗ'
ದೊಡ್ಡವರ ಪೆಟ್ಟ್‌ನೊಟ್ಟಿಗೆ
ಕೊಂಡಾಟ ಪಡೆವ 'ಗಟ್ಟಿಗ'
ಇಂಗ್ಲಿಷ್‌ನವರ ಪದಗಳೊ
ಪೊರಮುಡಿ ಉಟ್ಟು ನಮೂರುಲಿ
ಮಮ್ಮಿ, ಡ್ಯಾಡಿ, ಆಂಟಿ ಅಂಕಲ್
ಗ್ರ್ಯಾನಿಗೆಲ್ಲ 'ಬೈ' 'ಬೈ' ಲಿ
ಅವ್ವ, ಅಪ್ಪ, ಚಾಮ್ಯವ್ವ ಚಾಂಪ
ಅತ್ತೆ, ಮಾವ, ಚಿಕ್ಕಯ್ಯ, ಬೋಜಪ್ಪ
ಕರೆವ ಜೇನ್‌ನ ಸಿಹಿ ನುಡಿ ನಮ್ಮದ್
ಸಂಬಂಧದ ಪರಿಮಳಲಿ ಹಿರಿ ಹಿಗ್ಗುವ ಬಾಳ್ ನಮ್ಮದ್

ಹಾಡ್ ಹಸೆ ಜಾತ್ರೆ ಹಬ್ಬ
ಎಲ್ಲ ಸಡಗರ ಸಂಭ್ರಮ
ಮತ್ತೆ ಮತ್ತೆ ನಮ್ಮವರ ಕಾಂಬ
ಬಂಧಗಳ ಸಂಗಮ

ಒಳ್ಳ ಕಾರ್ಯಕೆ ಬರೊಕು ಇಲ್ಲಿ
ಅಕ್ಕಿ ಹಾಕಿಕೆ 'ಕಾರೋಣ' ಕೆ
ಎಲ್ಲೆ ಇದ್ದರೂ ಕಾಯೋಕುಂತ
ಬೇಡಿಕಂಬ ಪದ್ಧತಿಗೆ

'ಪೊಲಿಯೇ ಬಾ' 'ಪೊಲಿಯೇ ಬಾ ಬಾ'
ಖುಷಿನ ಕರೆಗೆ ಐನ್‌ಮನೆವೆಲ್ಲ ಸೇರ್‌ವೆ
ಪಿಟಾಕಿ, ಗರ್ನಾಲ್, ಹೂ ಚೆಟ್ಟಿನ ಹೊತ್ತ್‌ಸಿ
ಖುಷಿಲಿ ಕೊಣ್ಡ್ ನಲ್‌ದವೆ

ಕಾಯಿಗುಂಡು, ಹುತ್ತೇರಿ ಕೋಲು,
ಕೊಣ್ತಗಳ ಸಡಗರ
'ಕೈಲ್‌ಪೋದು'ಗೆ ಪೂಜೆ ಮಾಡಿ
'ಕಾವೇರಿ'ಗೆ ಬೆತ್ತ್ ನೆಡುವ ಅಮಸರ

ನಾಡ್ ನಮ್ಮದ್ ಕೃಷಿನ ಬೀಡ್
ನೋವು ಮರೆಸುವ ಬದ್‌ಕ್‌ನ ಪಾಡ್
ಏರಿಳಿತಗಳ ಸ್ವರ್ಗ ನರಕಲಿ
ಉಯ್ಯಾಲೆಯಾಡ್ತಾ ಬಾಳುವ ಸೂಡ್

ಬಿಸ್‌ಲ್‌ನ ಕಾವ್‌ಗೆ ನೆರ್ಳ್ ಕೊಡುವ
ತಂಪು ಮರಗ್ಳೈ ಇಲ್ಯುಟು
ಹಕ್ಕಿಗೊರಲ್‌ಲಿ ಸಂತೈಸುವ ಇಂಪಾದ
ಜೋಗುಳಪದ ಬೇರೆ ಎಲ್ಯುಟು!

ಸಾಲು ಮಲೆಗಳ್‌ಲಿ ಕವನ ಬರೆವ
ಪೊರ್ಲುನ ತೇಲ್ ಮೋಡ ಇಲ್ಯುಟು
ಇಂತ ಖುಷಿನ ಸ್ವರ್ಗ ಸೀಮೆ
ನಮಿಗೆ ಬೇರೆ ಎಲ್ಯುಟು

✍ ಶಿವದೇವಿ ಅವನೀಶ ಚಂದ್ರ

ಸುಳ್ಯಕೋಡಿ
ಮೊ : 9900278269

# ಕೊಡಗ್ ನಮ್ಮದ್ ಮತ್ತೆ ಅದರಲುಟ್ಟು ನಮ್ಮ ಜನಾಂಗ

ಕರ್ನಾಟಕ ರಾಜ್ಯದ ಸಣ್ಣ ಜಿಲ್ಲೆ ಕೊಡಗ್ ನಮ್ಮದ್.
ಕಾವೇರಮ್ಮ ಹುಟ್ಟಿದ ಪುಣ್ಯ ಭೂಮಿ ಕೊಡಗ್ ನಮ್ಮದ್.
ನಮ್ಮದ್ ಕೊಡಗ್ ನಮ್ಮದ್, ನಮ್ಮದ್ ಜಮ್ಮ ಕೊಡಗ್ ನಮ್ಮದ್.
ಎಲ್ಲೆಲ್ಲೂ ಬೆಟ್ಟಗುಡ್ಡಗ, ನಾಡ್, ನೋಡ್ ನಮ್ಮದ್.
ಮಳೆನಾಡ್ ನೋಡ್ ನಮ್ಮದ್, ಆಹಾ, ಮಲೆನಾಡ್ ಕೊಡಗ್ ನಮ್ಮದ್ ॥2॥
ಹಸಿರ್ ಚಪ್ಪರ ತಂಪುಗಾಳಿನ ಕೊಡಗ್ ನಮ್ಮದ್.
ಜುಳು ಜುಳು ಹರಯೋ ಹೊಳೆ ತೋಡ್ ನಮ್ಮದ್ ॥2॥
ಕಾಪಿ, ಯಾಲಕ್ಕಿ, ವಳ್ಳೆ ಮೆಣಸ್ ಬೆಳ್‌ಸುವ ಕೊಡಗ್ ನಮ್ಮದ್.
ಭತ್ತ ಗದ್ದೆಗಳ ಸೊಬಗ್ ನೋಡ್ ನಮ್ಮದ್ ॥2॥
ಪ್ರಾಣಿ ಹಕ್ಕಿಗಳ, ಹಣ್ಣು ಹಂಪಲ್‌ಗಳ ತಾಣ ಇದು ಕೊಡಗ್ ನಮ್ಮದ್.
ಮರಗಿಡಗಳ, ಬಳ್ಳಿ ಹಬ್ಬುಗಳ, ಪೊರ್ಲ್ ನೋಡ್ ನಮ್ಮದ್ ॥2॥
ಕರ್ನಾಟಕ ರಾಜ್ಯದ॥
ಕೊಡಗ್ ಜಿಲ್ಲೆಲಿ ಕೇಳಿಪಟ್ಟುಟು ಗೌಡ ಜನಾಂಗ ನಮ್ಮದ್
ಗೌಡ ಜನಾಂಗ ಬಾಳಿ ಬದುಕಿದ ಶತಶತಮಾನಗಳ ಕೊಡಗ್ ನಮ್ಮದ್ ॥2॥
ಅರೆಬಾಷೆ, ಸಂಸ್ಕೃತಿಗೆ ಕೇಳಿಪಟ್ಟ ಕೊಡಗ್ ನಮ್ಮದ್.
ವೀರಶೌರ್ಯಕ್ಕೆ ಹೆಸರಾದ ನಾಡು ನಮ್ಮದ್ ॥2॥
ಗುಡ್ಡೆಮನೆ ಅಪ್ಪಯ್ಯಗೌಡರ್ ಹುಟ್ಟಿದ ಹೆಮ್ಮೆಯ ಕೊಡಗ್ ನಮ್ಮದ್.
ನಮ್ಮ ಸಂಸ್ಕೃತಿ, ನಮ್ಮ ಪರಂಪರೆ ಸಾರಿ ಹೇಳೋ ಅವರ ಪುತ್ಥಳಿಗೆ ನಮನ ನಮ್ಮದ್ ॥2॥
॥ ಕರ್ನಾಟಕ ರಾಜ್ಯದ॥
ಶಾಂತಿ ಸಂಕೇತ ಬಿಳಿ ಕುಪ್ಪಸ, ಪ್ರೀತಿ ಸಂಕೇತ ಕೆಂಪು ದಟ್ಟಿ,
ಕೊಡಗ್‌ನ ಜನಾಂಗದ ಉಡುಪು ನಮ್ಮದ್ ॥2॥
ತಲೆಗೆ ಪ್ಯಾಟ ನಮ್ಮದ್, ಹೆಗ್ಗಳಿಕೆಗೆ ರಾಜ ತೊಡಿಸಿದ ಪ್ಯಾಟ ನಮ್ಮದ್ ॥2॥
ಹೆಗ್‌ಲಿಗೆ ಕೋವಿ, ಸೊಂಟಲಿ ಕತ್ತಿ, ಶೌರ್ಯ ಸಂಕೇತ, ನಮ್ಮದ್ ॥2॥
ಗೆಂಟೀ ಕಟ್ಟಿ ಸುತ್ತಿ ನೆರಿ ಮಾಡಿ ಉಟ್ಟ ಪಟ್ಟೆ ಸೀರೆನ ಪೊರ್ಲ್ ನಮ್ಮದ್॥2॥
ತಲೆಗೆ ಕೋರ್‌ಚೌಕ ಕೊಡಗ್‌ನ ಗೌಡರ ಉಡುಪು ನಮ್ಮದ್ ॥2॥
ಜೋಮಲೆ ಸರ, ಪದ್‌ಕ, ಕೈ ತುಂಬಾ ಬಳೆ, ಖಡ್ಗ, ಚಿನ್ನಾಭರಣ ಕೊಡಗ್‌ನ ಆಭರಣ ನಮ್ಮದ್ ॥2॥
ಕೈಲ್ ಮುಹೂರ್ತ, ಪುತ್ತರಿ, ಕಾವೇರಿ ಸಂಕ್ರಮಣ ಕೊಡ್‌ಗ್‌ನ ಹಬ್ಬ ನಮ್ಮದ್ ॥2॥
ನುಡುಸುವೆ, ಮದುವೆ ಮತ್ತೆ ಬ್ಯಾರೆ ಜಂಬಾರಲಿ ಗೌಡವಾಲಗ ನಮ್ಮದ್ ॥2॥
ಹಾಕುವೆ ವಾಲಗಕ್ಕೆ ತಕ್ಕ ಹೆಜ್ಜೆ ಕುಣ್‌ತ ಲಾಯ್ಕ ನಮ್ಮದ್ ॥2॥
ಎಲ್ಲಿಯಿದ್ದರೂ ಹೆಂಗೆ ಇದ್ದರೂ ಮರೀಬಡೀ ತವರೂರು ಕೊಡಗ್ ನಮ್ಮದ್ ॥2॥

✍ ಸೆಟ್ಟೆಜನ ಗೀತಾ ಪದ್ಮನಾಭ

# ಸೃಷ್ಟಿದ್ ವ್ಯತ್ಯಾಸಗ

ಬಂಗಲೆ ಒಳಗಡೆನ ಬದ್‌ಕ್
ಗುಡಿಸಲನೊಳಗಡೆನ ಬದ್‌ಕ್ ॥
ಹರಕ್‌ಲ್ ಬಟ್ಟೆನ ಉಟ್ಟ । ಮುರ್‌ಕ್‌ಲ್ ಮನೆ
ಒಳಗಡೆನ ಬದ್‌ಕ್ ॥
ನಿನ್ನದ್ ಎಲ್ಲಿನ ಬದ್‌ಕ್ ।
ಅಯ್ಯೋ ಎಷ್ಟೊಂದು ವ್ಯತ್ಯಾಸಗ ॥
ನಿನ್ನಲ್ಲೊಂದಿಷ್ಟ್ ಪ್ರಶ್ನೆಗಳ ಕೇಳೋಕುತ ॥
ದೇವುರು ತೇಳುವ ಪದ
ನನ್ನ ಕಿವಿಗೆ ಬಿದ್ದಲ್ಲಿಂದ ॥
ನಿಂಗಾಗಿ ಎಷ್ಟೊಂದು ಗುಡಿಗೋಪುರಗ ॥
ಪೂಜೆ ಪುರಸ್ಕಾರ ಜೈಕಾರಗ ॥
ಆದರೆ ನೀ ಮಾತ್ರ ನಿರಾಕಾರ ॥
ಘಂಟೆ ಜಾಗಟೆ ಶಂಖಗಳ ಶಬ್ದ ॥
ನಾಸ್ತಿಕನೋ ಆಸ್ತಿಕನೋ
ನಿನ್ನ ಸ್ಥಿರತೆ ಬಗ್ಗೆ ನಂಗೆ ಇಲ್ಲದಾತ್ ನಿಖರತೆ ॥
ಯಾಕೆ ಹೇಳ್ ಈ ಮೌನ ॥
ಭೂಮಿ, ಆಕಾಶ, ನೀರ್ ಗಾಳಿ ಬೆಂಕಿ ॥
ಈ ಪಂಚ ಭೂತಗಳಲ್ಲಿ ಕರಗಿ ಹೋಗುವ ನಂಗೆ ॥
ತೋರ್ಸುದ್ಯಾಗ ಆ ನಿನ್ನ ವಿಶ್ವ ರೂಪನ

✍ತೆಕ್ಕಡ. ಬಿ. ಕುಮಾರಸ್ವಾಮಿ

ಮುತ್ತಾರ್ಮುಡಿ
ಮಡಿಕೇರಿ ತಾ. ಕೊಡಗು ಜಿಲ್ಲೆ
ಮೊ : 9483234335

# ನಾ ಕಿಡಿಯಾಕನ.......

ಯಾಗಳೊ ಮರ್ತ್ ಹೋಕಾಗಿದ್ದ
ಹಳ್ಸೆಲ್ ಹಗೆನ ಕಿಡಿ ಬಂದ್
ಎದೆ ಒಳಗೆ ಹೊಗಿಯೆಕೆ ಸುರುಮಾಡ್ತ್
ಬೇಡಾಂತ ಹೇಳಿರೆಸ ಕೇಳದೆ
ಎದ್ದ್ ಹೊತ್ತಿಕಂಡ ಕಿಚ್ಚಿನ ಗಾವುಗೆ
ಒಳಗೆಲ್ಲ ಉರಿಯೆಕೆ ಸುರಾತ್

ತಡಿಯೆಕೆ ಬೊತ್ತಾದಾಕನ ಕಾರಿಕೆ ಶುರುಮಾಡ್ದೊ
ಕಂಡ ಕಂಡವರ ಹಕ್ಕಲೆಲ್ಲ!
ಅವು ಬಿರ್‌ಗಾಳಿಯಾದೊ...
ಅದರಷ್ಟಕ್ಕೆ ಹೊಗಿಯತ್ತಿದ್ದ ಕಿಡಿ
ಬೀಸಿ ಬಂದ ಜೋರ್‌ನ ಬಿರ್‌ಗಾಳಿಗೆ
ಇಡೀ ಶರ್‍ರ್‌ನೇ ಹೊತ್ತಿ ಹೋತ್!

ಯಾಕೆ ಇದ್ ಹೀಂಗಾತ್‌ತೇಳಿ
ಕೇಳುವ ಯತ್ನ ಯಾರ್‌ಸ ಮಾಡದೆ
ಎಲ್ಲೊವು ನನ್ನ ದೂರ ಇಸಿದೊ
ನಾ ಕಿಡಿಕಾರುವ ಕೆಂಡದುಂಡೆತ್ತೇಳಿ!

ತಣ್ಣಂಗೆನ ಹನಿಗೆ ಕಾದ್‌ಕಂಡ್ ಇದ್ದ ನೆಲನಂಗೆ
ನಾ ಕಾದೆ....
ಹೊತ್ತಿಕಂಡ ಕಿಚ್ಚಿನ ಚೆಣ್ಣಿಕೆ
ತಣ್ಣೀರ್‌ನಂತ 'ನನ್ನವು' ತೇಳುವವರ ಪ್ರೀತಿನ ಮಾತ್‌ಗೆ
ಕಾದ್‌ಕಂಡೇ ಒಳೆ.
ಕ್ಷಣ ಕ್ಷಣಸ ಕಣ್ಣ ರೆಪ್ಪೆನ ಮುಚ್ಚಿನೂ ಮುಚ್ಚದಂಗೆ.

✍ಬಾರಿಕೆ ಶೈಲಜ ದಿನೇಶ್

ಭಾಗಮಂಡಲ,
ಮಡಿಕೇರಿ ತಾಲೂಕು.

# ವಯಸ್ಸಾದ ಕಾಲ

ಮನುಷ್ಯ ಹುಟ್ಟಿಬಾಕನ ಬೆತ್ತಲೆ
ಬಂದ್ ಕಡೆಗೊಮ್ಮೆ ಹೋಕನ ಕತ್ತಲೆ
ನಡುಲಿ ಇಲ್ಲದಾತ್ ಇರಿಕೆ ಒಂದು ನೆಲೆ
ವಯಸ್ಸಾದ ಕಾಲಕ್ಕೆ ಮಕ್ಕಳೂ ಕೊಡದ ನೆಲೆ

ಅಮ್ಮ ಮಾಡ್ದ ಅಡ್ಗೆ ಅಮೃತ
ಅಪ್ಪ ಹೇಳ್ವ ಬುದ್ಧಿಮಾತ್ ಮಿತ
ಈಗ ಬ್ಯಾಡದಾತ್ ಮಕ್ಕಳಿಗೆ ವಯಸ್ಸಾದ ಅವ್ವ-ಅಪ್ಪ
ಬಾಗಿದ ಬೆನ್ನ್, ಕಾಲ್ ಕೈಗಳ ಗಂಟ್ ದಪ್ಪ

ಅವ್ವ ಅಪ್ಪನ ದೂಡುವೆ ಹೊರಗೆ
ಬದ್‌ಕಿಕೆ ಆಗದೆ ಇದ್ದರೆ ಹಾರಿತ ಹೇಳುವೆ ಕೆರೆಗೆ
ಅಪ್ಪ-ಅವ್ವನ ಮೇಲೆ ಯಾಕೆ ಸೇಡ್‌ನ ಹಗೆ
ಹಾಕುವೆ ಮಕ್ಕ ಆಶ್ರಮದ ಒಳಗೆ, ಅಪ್ಪಿ ತುಂಬಿದೆ ನಗೆ.

ಯಾಕೆ ಬ್ಯಾಡ ಮಕ್ಕಳಿಗೆ ಹಿರಿಯವು ಅವ್ವ ಅಪ್ಪ
ಮಕ್ಕಳ ಸಾಕಿ ಬೆಳ್ಸಿದ್, ಹಿರಿಯವು ಮಾಡ್ದ ತಪ್ಪಾ?
ಇಳಿ ವಯಸಲಿ ನಡ್‌ಗುವ ಕಾಲ್ ಕೈಗಳಿಗೆ
ದೂರ್‌ತ್ ಮಕ್ಕತೇಳುವ ಊರುಗೋಲುಗ
ಇಲ್ಲದಾತ್ ಇಳಿವಯಸ್‌ನಾ ಹಿರಿಯವ್ಕೆ ನೆಮ್ಮದಿನೆ ನೆಲೆ.

✍ ಎಸ್.ಕೆ. ಈಶ್ವರಿ

ಮೇಕೇರಿ ಗ್ರಾಮ
ಕಗ್ಗೋಡ್ಲು ಅಂಚೆ
ಮಡಿಕೇರಿ
ಮೊ : 9481370263

# ದೊಡ್ಡತ್ತೆ ಮಗುಳು ಮೀನಾ

ದೊಡ್ಡತ್ತೆ ಮಗುಳು ಮೀನಾ
ಮನೆ ಕಡೆಗೆ ಯಾಕಿಲ್ಲೆ ನಿಂಗೆ ಗ್ಯಾನ?
ಅವ್ವ ಹೇಳಿಕಂಡಿದ್ದೊ ಹಪ್ಪಳ ಮಾಡಿಕೆ
ಜನ ಇಲ್ಲೆತ್ತೇಳಿದೇ ಪರಿಚಿಕಂಡಿದ್ದೊ
ಬಂದೋಗು ಮನೆಗೊಮ್ಮೆ ನೀ ಓ ಮೀನಾ
ಬರೋವಾರ ನಮ್ಮಲ್ಲಿ ಗದ್ದೆಗಳುವುಟ್ಟು
ಬಂದಾರೆ ಒಂದು ವಾರ ನಿತ್ತೋಗು ಮನೆಲಿ
ಉಪ್ಪನ ಕಾಯಿ ಹಾಕಿಕೆ ಕಾಡ್ ಮಾವುನ ಕಾಯಿ ಇಲ್ಲೆ
ಮಾವನ ಒಟ್ಟಿಗೆ ಕೇಳಿ ನಿಂಬೆ ಹುಳಿ ತಂಬಾ
ಮೀನಾ ಮಾವನ ಒಟ್ಟಿಗೆ ಕೇಳಿ ನಿಂಬೆ ಹುಳಿ ತಂಬಾ?
ಬಂದೋಗು ಮನೆಗೊಮ್ಮೆ ನೀ ಮೀನಾ
ತಂಗೆ ಮೋಟಿ ಗೂಡೆ ಹೇಳಿಕಂಡೇ ಇತ್ತ್
ಅತ್ತಿಗೆ ಬಾರದೆ ವರ್ಷಾತ್‌ತ್ತೇಳಿ
ಬಂದರೆ ನಮ್ಮನೆಗೆ ಒಂದೇ ಬೆಂಚ್‌ಲಿ ಕುದ್ದ್‌ಕಂಡ್
ತಮಾಷೆಗೆ ಜಗಳಾಡಿಕಂಡಿರಿಕಾಕನ
ಮಧ್ಯಲಿ ನಾ ಕುದ್ದ್ ನಗೆಡಕಾ ....
ಬಂದೋಗು ಮನೆಗೊಮ್ಮೆ ನೀ ಓ ಮೀನಾ
ಸಣ್ಣ ಪ್ರಾಯಲಿ ನಾವ್ ಆಟ ಆಡಿಕಂಡಿದ್ದ ದಿನ
ಮತ್ತೆ ನಂಗೆ ಈಗ ನೆನಪಾದೆಯ
ಕುಮೇರಿ ಪಾರಕೆ ಹೋಗಿ ಕುರೆ ಬೆರ್ಸಿ ಕುಡೆಕಾಗಿ
ನೀರ್ ಸೋಂತೆ ಕಾಯಿನ ಕೊಯ್ದ್ ತಿಂದ ಆ ದಿನ
ಮತ್ತೆ ನಂಗೆ ನೆನಪಾದೆಯ
ಮೀನಾ ನಂಗೆ ಮತ್ತೆ ನೆನಪಾದೆಯ

✍ ಮಾದವ ಚೆಂಬು.

ಚೆಂಬು ಗ್ರಾಮ
ಮಡಿಕೇರಿ ತಾ॥
ಕೊಡಗು ಜಿಲ್ಲೆ

## ಹೊಸ ರುಚಿ

# ಮೊಟ್ಟೆ ಜಿಲೇಬಿ

**ಬೇಕಾಗುವ ವಸ್ತುಗ:** ಕೋಳಿಮೊಟ್ಟೆ–4, ಸಕ್ಕರೆ–5 ದೊಡ್ಡ ಸ್ಪೂನ್, ಮೈದಾ–1 ಕಪ್, ಉಪ್ಪು 1 ಚಿಟಿಕೆ, ಎಣ್ಣೆ ಹುರಿಯಕೆ ತಕ್ಕಷ್ಟು.

**ಮಾಡುವ ವಿಧಾನ:–** ಮೊಟ್ಟೆನ ಒಡ್ದ್ ಸಕ್ಕರೆ ಕಲ್ಸಿ ಬೇರೆಸೊಕು, ಮೈದಾ ಪುಡಿ ಉಪ್ಪು ಸೇರ್‌ಸಿ ಗಟ್ಟಿಯಾಗಿ ಕಲ್ಸೊಕು (ಸೌಟ್‌ಲಿ ಎತ್ತಿ ಹುಯ್ಯುವಷ್ಟು ಗಟ್ಟಿ) ಒಲೆಲಿ ಎಣ್ಣೆ ಇಸಿ ಮತ್ತೆ ಒಂದು ತೆಂಗಿನ ಚಿಪ್ಪಿ ತಕ್ಕಂಡ್ ಅದ್ಕೆ ಒಂದು ಚಿಕ್ಕ ತೂತ ಮಾಡಿ, ಎಣ್ಣೆ ಬಿಸಿಯಾಕನ ಹಿಟ್ಟ್‌ನ ತೆಗ್ದ್ ಚಿಪ್ಪಿನ ತೂತಲಿ ಎಣ್ಣೆಗೆ ಜಿಲೇಬಿಯ ಆಕಾರಲಿ ಹೊಯ್ಯಕು. ರುಚಿಯಾದ ಜಿಲೇಬಿ ರೆಡಿಯಾದೆ.

# ಸೂರ್ಯಕಲಾ ಸ್ವೀಟ್ಸ್

**ಬೇಕಾಗುವ ವಸ್ತ್ಗ:–**ಹಾಲ್–1 ಲೀಟರ್, ಗೇರ್ ಬೀಜ–100 ಗ್ರಾಂ, ಕಲ್ಲುಸಕ್ಕರೆ–3 ಕಪ್, ರವೆ– 100 ಗ್ರಾಂ, ಮೈದಾ–100 ಗ್ರಾಂ, ಏಲಕ್ಕಿ–ರುಚಿಗೆ ತಕ್ಕಷ್ಟ್, ಕೇಸರಿಬಣ್ಣ–ಸ್ವಲ್ಪ, ಉಪ್ಪು–ರುಚಿಗೆ ತಕ್ಕಷ್ಟ್, ಡಾಲ್ಡಾ–ರವೆ, ಮೈದಾಹಿಟ್ಟ್ ಕಲ್‌ಸಿಕೆ.

**ಮಾಡ್‌ವ ವಿಧಾನ:–** ಗೇರ್ ಬೀಜನ ನೀರ್‌ಲಿ ನೆನೆಹಾಕಿ ಅರೆಯೋಕು, ಹಾಲ್‌ನ ಲಾಯ್ಕ ಕಾಸಿ ಇಸೋಕು, ಅರ್‌ದ ಗೇರು ಬೀಜ, ಒಂದು ಕಪ್ ಕಲ್ಲು ಸಕ್ಕರೆ (ಪುಡಿಮಾಡಿ) ಏಲಕ್ಕಿ ಹುಡಿ ಎಲ್ಲಾ ಸೇರ್ಸಿ ಹಾಲಿಗೆ ಬೆರೆಸಿ ಮತ್ತೆ ಬಿಸಿ ಮಾಡಿ ತಿರುಗಿಸೊಕು.

ರವೆ, ಮೈದಾ, ಉಪ್ಪು (ರುಚಿಗೆ) ಇವುಗಳನ್ನ ಡಾಲ್ಡಲಿ ಕಲ್ಸೊಕು, ಕಲ್ಸಿದ ಹಿಟ್ಟ್‌ನ ಸಣ್ಣ ಸಣ್ಣ ಪೂರಿಗಳಂಗೆ ಲಟ್ಟ್‌ಸೋಕು. ಒಂದು ಪೂರಿ ಮೇಲೆ ನೆಲ್ಲಿಕಾಯಿ ಗಾತ್ರದಷ್ಟ್ ಗೇರ್ ಹಾಲ್‌ನ ಪಾಕನ ಇಸಿ ಅದರ ಮೇಲೆ ಮತ್ತೊಂದ್ ಪೂರಿನ ಇಸಿ ಬದಿಗಳನ್ನ ಲಾಯಿಕ ಅದುಮಿ (ಒತ್ತಿ) ಎಣ್ಣೆಲ್ಲಿ ಹುರಿಯೋಕು.

ಉಳ್‌ದ 2 ಕಪ್ ಕಲ್ಲು ಸಕ್ಕರೆನ ಹುಡಿಮಾಡಿ ಒಂದ್ ಕಪ್ ನೀರ್ ಸೇರ್‌ಸಿ ಸಕ್ಕರೆ ಪಾನಕ ತಯಾರಿಸಿಟ್ಟ್ ಕಂಡ್ (ಅದಿಕೆ ಕೇಸರಿ ಬಣ್ಣನ ಬೇರೆಸೋಕು) ಹುರಿದ ಪೂರಿನ ಪಾನಕಕೆ ಹಾಕಿ ತೆಗೆಯೋಕು. ಈಗ ಸೂರ್ಯಕಲಾ ಸ್ವೀಟ್ಸ್ ತಯಾರಾದಂಗೆ .

✍ಎಂ.ಎಂ.ಕವಿತ

ಕಾಳೆ ತಿಮ್ಮನ ಹಳ್ಳಿ ಗ್ರಾಮ
ಮುತ್ತೂರು ಅಂಚೆ
ಪಿರಿಯಾಪಟ್ಟಣ ತಾಲ್ಲೂಕು

# ಬಾಳೆ ಎಲೆ ಮಹತ್ವ

ಬಾಳೆ ಇಲ್ಲದೆ ಯಾವುದೇ ಪೂಜೆ, ನೈವೇದ್ಯ ಹಬ್ಬ ಮದ್ದು, ಹರ್‌ಸೇವೆ, ಸಾವುನೂ ನಡಿಯೋದ್ಲೆತೇಳ್‌ದೇ ನನ್ನ ಅಭಿಪ್ರಾಯ.

ನಾವು ಪ್ರತಿಯೊಂದು ಕಾರ್ಯ ಸುರು ಮಾಡ್‌ಕನ ಗಣಪತಿ ಪೂಜೆ ಮಾಡಿನೆ ಸುರು ಮಾಡ್ದು ಗಣಪತಿಗೆ ಅಕ್ಕಿ ತೆಂಗಿನಕಾಯಿನ ಮಡ್ಗುದೇ ಜೋಡಿ ಕೊಡಿ ಬಾಳೆಲೆಲಿ. ದೇವ್ರುಗೆ ಎಡೆ ಹಾಕ್‌ಕನ, ದೆವ್ವಕ್ಕೆ ಕೊಡ್‌ಕನ, ಕಡೆ ನಾಟಿ ದಿನ ಗದ್ದೆಲಿ ಗಣೋದಿಗೆ ಮಡ್‌ಗ್‌ಕನ, ಹರ್‌ಸೇವೆಲಿ, ಹೆಣ್ಮಕ್ಕಳ ಹೊಲೆ ತೆಗಿಯಕನ ಫಲದ ಪೂಜೆಲಿ, ವಲೆ ಪೂಜೆಲಿ ಅಂತು ಪ್ರತಿಯೊಂದಕ್ಕೂ ಕೊಡಿಬಾಳೆಲೆ ಬೇಕು. ಮಳೆಗೆ ಕೊಡೆ ಆದೆ, ಒಣಗಿರೆ ಹಗ್ಗಾದೆ, ಬುತ್ತಿಗೆ ಚೌಕಾದೆ. ಹಿಂದೆ ಮದ್ವೆ ಬಾತ್‌ಂತ್ತೇಳ್ರೆ ನೆರೆಮನೆವ್‌ಕೆ ಬಾಳೆಲೆ ಕುಯೊದೇ ಒಂದು ದೊಡ್ಡ ಕೆಲ್ಸ ಆಗಿತ್.

ಮದ್ವೆಲಂತೂ ಹೈದ, ಗೂಡೆಗೆ ಫಲ ಪೂಜೆಗೆ, ದಿಬ್ಬಣದವ್ಕೆ ಮದ್ವ್‌ಣ್ಣ ನೆರೆ ತಕಂಡೋಕನ, ವಲೆ ಪೂಜೆಗೆ, ಇಂತದಕ್ಕೆಲ್ಲಾ ಎಲೆ ಬೇಕಾದೆ. ಹೆಣ ಮೀಸಿ ಮಲ್ಗ್‌ಸ್‌ಕನ ಬೆಂಚಿ ಮೇಲೆ ಒಂದು ಇಡೀ ಬಾಳೆಲೆ ಹಾಕುವೆ–ಸತ್ತ ಮೂರು ದಿನಲಿ ಶುದ್ಧ ಮಾಡ್ವೆ–ಅಂದ್ ಸುಡ್‌ಕುಳಿಗೆ ಹೋಕನ ದಾರಿಲಿ ಬುತ್ತಿಕಟ್ಟುದು ಎಲೆನ ಮಡ್‌ಚಿ ಎಡೆ ಹಾಕ್‌ಕನ ಕೊಡಿ ಬಾಳೆಲೆ ಬೇಕಾದೆ.

# ಬಾಳೆ ಕಂದ್

ಇದರ್‌ನ ಸತ್ಯನಾರಾಯಣ ಸ್ವಾಮಿ ಪೂಜೆ ಮಾಡ್‌ಕನ ಕುರ್ಚಿನ ಎರಡ್ ಕಡೆ ಕಟ್ಟ್‌ವೆ. ಮದ್ವೆ, ಹರ್‌ಸವೆ, ಆಯುಧ ಪೂಜೇಲಿ, ಅಂಗ್‌ಡಿಗಳಿಗೆ, ವಾಹನಗಳಿಗೆ ಮಿಷಿನ್‌ಗಳಿಗೆ, ಹೊಸ ಮನೆಗೆ, ದಾರೀಲಿ ತೋರಣ ಕಟ್ಟಿಕೆ ಅಲ್ಲದೆ, ಹೆಣ ಹೊರ್‌ಕನಸನ ಚಟ್ಟಕ್ಕೆ ಈ ಜೋಡಿ ಸಣ್ಣ ಬಾಳೆಕಂದ್‌ಗಳ ಕಟ್ಟ್‌ವೆ. ಹೈದ, ಗೂಡೆಗ ಮದ್ವೆ ಆಗದೆ ಸತ್ತರೆ ತಾಳಿ ಕಟ್ಟ್‌ಸಿಕೆ ಉಪಯೋಗ್‌ಸುವೆ.

# ಬಾಳೆ ಹಣ್ಣ್ ಮತ್ತೆ ಕಾಯಿ

ಬಾಳೆ ಹಣ್ಣ್‌ನ ಪೂಜೇಲಿ ನೈವೇದ್ಯಕ್ಕೆ, ಗಣಪಂಗೆ, ಕಜ್ಜಾಯಕ್ಕೆ, ಬಜ್ಜಿಗೆ, ಚಿಪ್ಸ್‌ಗೆ, ಜಾಮ್‌ಗೆ, ಬನ್ಸ್‌ಗೆ, ಗೋಳಿ ಬಜೆಗೆ, ವೈನ್, ಮದ್ವೇಲಿ ಹಾಲ್ ತುಪ್ಪ ಕುಡ್‌ಸಿಕ್ಕೆ, ಮದ್ವಣ್ಣ ನೆರೆಗೆ, ದಾರಿ ಬುತ್ತಿಗೆ, ಗದ್ದೆಲಿ ಗಣೋದಿ ಮಡ್ಗ್‌ಕನ, ಮತ್ತೆ ಹಿಂದೆ ಓಟದ ಗದ್ದೇಲಿ ಓಡ್‌ದವ್ಕೆ ಬಾಳೆ ಗೊನೆನ ಇನಾಮ್ ಆಗಿ ಕೊಡ್ದು, ಉಂಡಾದಂಗೆ ಒಂದೊಂದು ಬಾಳೆ ಹಣ್ಣ್ ತಿಂದರೇ ಜೀರ್ಣಕ್ಕೆ ಬಾರಿ ವಳ್ಳೆದ್. ಅಲ್ಲದೆ ಶುದ್ಧಲಿ ಒಂದು ದಿನದ ಹಿಂದೆ ಸಾಯಂಕಾಲ ನೀರ್‌ನೆರ್‌ಳ್ಗೆ ಮಡ್‌ಗ್‌ಕನ ಸರ್‌ಕ್‌ಲಿ ಮರ ಬಾಳೆಗೊನೆ ಇಲ್ಲರೆ ಬಾಳೆಹಣ್ಣ್‌ನ ಚಿಪ್ ಇಲ್ಲದಿದ್ದರೇ ಶುದ್ಧನೇ ಕಳ್‌ಯಕ್ಕಿಲ್ಲೆ. ಶುದ್ಧದ ಊಟಕ್ಕೆ ಬಾಳೆಕಾಯಿ ಕುದು ಹಾಕಿ ಗೈಪು ಮಾಡ್ವೆ.

# ಬಾಳೆದಿಂಡ್

ಬಾಳೆದಿಂಡ್‌ನ ರಟ್ಟೆನ ತೆಗ್ದ್ ಪೂಜೆಲಿ ಗಂಧ ಧೂಪದ ಹೊಗೆ ಹಾಕ್‌ಕೆ ಚಮಚ ಆಗಿ ಉಪಯೋಗ್‌ಸ್‌ವೆ. ಹಿಂದೆಲ್ಲ ಬಾಳೆಕಟ್ಟ್‌ಗಳ್‌ನ್ನ ಒಂದೇ ಸಮ ಕೊಯ್ದ್ ಹತ್‌ತ್ರ ಜೋಡ್‌ಸಿ ಅಂಗಳಲಿ ಮಳೆ ನೀರ್‌ಗೆ ಮಡ್‌ಗಿರೆ ಮನೆಕರ್ಚ್‌ಗೆ ಬೇಕಸ್ಟ್ ನೀರ್ ಸಿಕ್‌ತ್ತಿತ್. ಇಡೀ ಐದಾರ್ ದಿಂಡ್‌ಗಳ್ನ ಜೋಡ್ಸಿ ಕಟ್ಟಿ ಹೊಳೆ, ಕೆರೆಗಳ್‌ಲಿ ತೆಪ್ಪ ಮಾಡ್ತಿದ್ದೊ. ಹರ್‌ಸೆವೆಲಿ ಕೋಲ ಕಟ್ಟ್‌ಕನ ವಲಿಗಳಾಗಿ ಮಾಡಿ ಮೇಲೇರಿ ಬೀಳ್‌ದು, ಮತ್ತೆ ಅಂಗರೇ ಕೋಲ ಕಟ್ಟಿದಂವ ಬಾಳೆದಿಂಡ್‌ನ ದನಂತ್ತೇಳಿ ಬಳ್ಳಿ ಕಟ್ಟಿ ಎಳ್‌ಕಂಡ್ ಹೋದೆ. ಸಣ್ಣದಿಂಡ್‌ನ ತುಂಡುಗೆ ಸಾವುಲಿ ಊದ್‌ಕಡ್ಡಿ ಕುತ್ತಿ ಮಡ್ಗ್‌ವೆ. ಶುದ್ಧಲಿ ಸ್ವರ್ಗ ಹೊಂದ್‌ಸ್‌ಕನ ಬಾಳೆ ಪಾಲದ ಮೇಲೆ ನಡ್‌ಕಂಡ್ ಹೋಗಿ ಸ್ವರ್ಗ ಸೇರಿಕಂತ್ಹೆಳಿ ಹೇಳ್ದು ರೂಢಿಲಿ ಉಟ್ಟು. ದಿಂಡ್‌ನ ವಳಗಿರ್ವ ತಿರ್‌ಳ್ನ ತೆಗ್‌ದ್, ಅದರ ಕೊಯ್ದ್ ಇಲಾತ್‌ಕಾಳ್‌ನ ಬೇಳೆ ಮಾಡಿ ಹಾಕಿ ಗೈಪ್ ಮಾಡಿರೆ ಬಾರಿ ಲಾಯ್ಕ ಆದೆ. ನಮ್ಮ ಹೊಟ್ಟೆಲಿ ಕೂದ್‌ಲ್, ಕಸ ಇದ್ದರೆ ಹೋದೆಗಡ. ಅಲ್ಲದೆ ಇನ್ನೊಂದು ವಿಶೇಷತ್ತೇಳ್ರೆ ಹೊಟ್ಟೆಲಿ ಕಲ್ಲ್ ಇದ್ದರೆ ಕಾಡ್ ಬಾಳೆದಿಂಡ್‌ನ ತಂದ್ ಜಜ್ಜಿ ರಸ ತೆಗ್‌ದ್ ಬರೀ ಹೊಟ್ಟೆಗೆ ಬೆಳಿಗ್ಗೆ ಕುಡ್ದರೆ ಹೊಟ್ಟೆಲಿರ್ವ ಕಲ್ಲ್ ಹೋದೆಗಡ. ಹಿಂದೆ ಹುಳಹಲ್ಲ್ ಬ್ಯಾನೆ ಆದರೆ ಬಾಳೆದಿಂಡ್ ರಸನ ತೆಗ್‌ದ್ ಸ್ವಲ್ಪ ಹತ್ತಿಲಿ ಮುಡ್ಸಿ ಬ್ಯಾನೆ ಹಲ್ಲ್‌ನ ವಿರುದ್ಧ ಕೆಮಿಗೆ ವಳಗೆ ಮಡ್ಗಿರೆ ಹಲ್ಲ್‌ಲಿ ಇದ್ದ ಹುಳಗ ಕೆಮಿಲಿ ಇರುವ ಹತ್ತಿಲಿ ಇರ್‌ತ್ತಿದ್ದೊಗಡ. ಕೊಡವ ಜನಾಂಗಲಿ ಮದ್ವೆಲಿ ಬಾಳೆ ದಿಂಡ್‌ನ ಕಡ್‌ದ್ ಬಂದರೆ ಯುದ್ಧ ಮಾಡಿ ಗೆದ್ದ್ ಬಂದಂಗೆ ಅರ್ಥ ಉಟ್ಟು.

# ಬಾಳೆ ಕೂಂಬೆ

ಬಾಳೆಗೊನೆ ಕಡ್‌ದ ಕೂಂಬೆನ ಸಣ್ಣ ಕೊಯ್ದ್ ನೀರುಳ್ಳಿ ಹಸಿಮೆಣಸ್ ಹಾಕಿ ಸ್ವಲ್ಪ ಕಂಯಿಮೀನ್ ಹಾಕಿ ಹೊರ್ದ್ ತಿಂದರೆ ತಡಿಗೆ ಬಾರಿ ವಳ್ಳದ್. ಆನೆಗೆ, ದನಗಳಿಗೆ, ಹಂದಿಗಳಿಗೆಲ್ಲ ಬಾಳೆ ವಳ್ಳ ಮೇವು ಸಹ ಹೌದು.

✍ ಕಡ್ಯದ ಪಾರ್ವತಿ ಕೃಷ್ಣಪ್ಪ

ಅವಂದೂರು
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.

ಹಿನ್ನೋಟ......

# ಮರೆಯಕ್ಕಾಗದ ಕುಸಿನ ಬಾಲ್ಯದ ದಿನಗ

· ನಿಕ್ಕರ್ ಮತ್ತೆ ವಿಕೆಸಿ ಹವಾಯಿ ಚಪ್ಪಲ್ ಹಾಕಂಡ್ ಓಡಾಡ್‌ತ್ತಿದ್ದ ಆ ದಿನಗ, ತುಂತುರು, ಬಾಲಮಂಗಳಕ್ಕಾಗಿ ಕಾದ್‌ಕಂಡ್ ಕುದ್ದ ಅದೆಷ್ಟೊ ಸೋಮಾರಗ, ಕಥೆ ಪುಸ್ತಕಗಳಿಗೆ ಊರ್‌ನ ಗ್ರಂಥಾಲಯ ಗೆಳೆಯರ ಮನೆಗಳಿಗೆ ಅಲ್‌ದಾಡ್‌ತ್ತಿದ್ದ ಆ ದಿನಗ, ಹೊಸ ಹಾಡ್‌ಗಳಿಗೆ 'ಹಲೋ ಸಂಡೆಗೆ' ರೇಡಿಯೋ ಮುಂದೆ ಕಾದ್‌ಕಂಡ್ ಕುದ್ದ ಅದೆಷ್ಟೊ ಆಯಿತವಾರಗ, ಚಾಳೆ ಗಿಡಂದ ಬ್ಯಾಟ್ ಮಾಡಿ ಮೂರು ರೂಪಾಯಿನ ಚೆಂಡ್ ತಕ್ಕಂಡ್ ಆಡ್ದ ಕ್ರಿಕೆಟ್ ಆಟಗ, ಟಿ.ವಿ ಲಿ ಸಿನೆಮಾ ನೋಡಿಕೆ ಸಿನೇತರ ಮನೆಲಿ ಕಾದ್‌ಕಂಡ್ ಕುದ್ದ ಶನಿವಾರದ ಇಂಬೊತ್ತ್‌ಗ, ಹೊತ್ತಾರೆ ಮನೆ ಬುಟ್ಟ್ ಇಸ್ಕೂಲ್‌ಗೆ ಹೋಕನ ದಾರಿಲಿ ಸಿನೇತರೊಟ್ಟಿಗೆ ಸಿನೆಮಾ ಮತ್ತೆ ಶಕ್ತಿಮಾನ್‌ನ ಕಡೇ ಚರ್ಚೆ ಮಾಡಿ ತಡಾಗಿ ಇಸ್ಕೂಲ್‌ಗೆ ಓಡ್ದ ಆ ದಿನಗ........

ಸೈಕಲ್ ಟಯರ್‌ನ ಹೊಡ್‌ಕಂಡ್ ಹಾಲಿಗೆ ನೆರೆಮನೆಗೆ ಹೋದ ಅದೆಷ್ಟೊ ಇಂಬೊತ್ತ್‌ಗ, ಕೈನ ಮ್ಯಾಲೆ ಎತ್ತಿ ಕೈಯಿಲ್ಲಿದ್ದ ಶಕ್ತಿನ ತೋರ್‌ಸಿ ಹೆಮ್ಮೆ ಪಟ್ಟ ಆ ದಿನಗ, ಪೆನ್ಸಿಲ್, ಕಡ್ಡಿ, ಡೆಸ್ಟರ್, ಸ್ಲೇಟ್‌ನ ಹೆಸ್‌ರ್‌ಲ್ಲಿ ತರಗತಿಲಿ ಗಲಾಟೆ ಮಾಡಿ ಮಾಸ್ಟರ್‌ಗಳ್‌ಂದ ಪೆಟ್ಟ್ ತಿಂದ ಆ ದಿನಗ, ಪರೀಕ್ಷೆನ ಹಿಂದೆನ ದಿನ ಹೊತ್ತಾರೆಂದ ಇಂಬೊತ್ ಮುಟ್ಟ ಆಟ ಆಡಿ ರಾತ್ರೆ ಪರೀಕ್ಷೆಗೆ ತಯಾರ್ ಆದ ಆ ದಿನಗ, ಹೋಮ್ ವರ್ಕ್ ಮಾಡದಕ್ಕೆ ಮಾಸ್ಟ್‌ಗಳ ಪೆಟ್ಟ್‌ನ ತಡೆಕೆ ಎರಡೆರಡ್ ಚೆಡ್ಡಿ ಹಾಕಿ ಇಸ್ಕೂಲ್‌ಗೆ ಹೋದ ಆ ದಿನಗ, ಉಜಾಲ ಬಾಲ್‌ಂದ ಗಾಡಿ ಮಾಡಿ ಅದರ್‌ಂದ ತಕ್ಕಂಡ ಮಜಾದ ಆ ದಿನಗ, ಸೈಕಲ್‌ನ ಬಾಡಿಗೆಗೆ ತಕ್ಕಂಡ್ ಊರಿಡೀ ತಿರ್‌ಗಿ ಮನೆಲಿ ಬೈಸಿಕಂಡ ಆ ದಿನಗ, ಇಸ್ಕೂಲ್‌ಲ್ಲಿ ಇಂಬೊತ್ ಗಂಟೆ ಹೊಡಿಯಾಕನ ಎಲ್ಲಾವುಕ್ಕಿಂತ ಮುಂದೆ ಗೇಟ್‌ಂದ ಹೊರೆಗೆ ಓಡ್‌ದ ಆ ದಿನಗ, ಬೇಸಿಗೆ, ದಸರ, ಕ್ರಿಸ್ಮಸ್ ರಜಲಿ ನೆಂಟ್ರ್‌ಗಳ ಮನೆಗೆ ತಿರ್‌ಗ್‌ತ್ತಿದ್ದ ಆ ದಿನಗ, ಬುಗುರಿ, ನೆಲ್ಲಿಕಾಯಿ ಮತ್ತೆ ನೇರಳೆ ಹಣ್ಣ್‌ಗಾಗಿ ಗೆಳೆಯರೊಟ್ಟಿಗೆ ಗುಡ್ಡಕಾಡ್ ಸುತ್ತುತ್ತಿದ್ದ ಆ ದಿನಗ, ಮಳೆ ಬಾಕನ ಕೊಡೆನ ಗಾಳಿಲಿ ಅಳ್‌ಂಬು ಮಾಡಿ ಕಡೆಗೆ ಮಳೆಲಿ ನೆನ್‌ಕಂಡ್ ಬ್ಯಾಗ್ ಪುಸ್ತಕನ ಚೆಂಡಿ ಮಾಡಿಕಂಡ್ ಮನೆ ಸೇರ್‌ದ ಆ ದಿನಗ, ತಪ್ಪು ಉತ್ತರ ಬರ್ದಕೆ ಮತ್ತೆ ತಪ್ಪು ಹೋಂವರ್ಕ್ ಮಾಡ್ದಕೆ ಬೆಂಚ್ ಮ್ಯಾಲೆ ನಿತ್ತ್ ಬ್ಯಾನೆನ ಅನುಭವಿಸಿದ ಆ ದಿನಗ, ರಜ ಮುಗ್‌ಸಿ ಇಸ್ಕೂಲ್‌ಗೆ ಹೊತ್ತಾರೆ ಹೊರ್‌ಡಕಾನ ಶೀತ ಜ್ವರ, ಹೊಟ್ಟೆ ಬ್ಯಾನೆ ಜೋರಾಗ್‌ತ್ತಿದ್ದ ಅದೆಷ್ಟೋ ಆ ದಿನಗ, ಗೆಳೆಯರೇ ಹೇಳಿ ಇವೆಲ್ಲದರ ಮುಂದೆ ಈಗನ ಹೊಸ ಜನರೇಷನ್ ಕಾಲ ಯಾವ ಲೆಕ್ಕ ಹೇಳಿ? ಇಂದ್ ನೋಡಿ ಕಾಲ ಬದ್‌ಲಾಗುಟ್ಟು. ಸಾವಿರಾರ್ ರೂಪಾಯಿ ಬೆಲೆ ಬಾಳುವ ಆಟ ಆಡುವ ಹೊಸ ಜನರೇಷನ್ ಮಕ್ಕಳಿಗೇನ್ ಗೊತ್ತು ? ಹತ್ತ್ ರೂಪಾಯಿ ಇಲ್ಲದ ಕಾರಣ ತರಗತಿನ ಗುಂಪು ಫೋಟೋ ತಕ್ಕಣಿಕ್ಕೆ ಸಾಧ್ಯ ಆಗದ ಆಕಾಲ ಅದ್. ಗ್ಯಾನ ಮಾಡಿ ಗೆಳೆಯರೇ ಹಳೆ ಆ ಕಾಲಕ್ಕೂ ಈಗನ ಈ ಹೊಸ ಕಾಲಕ್ಕೂ ಎಷ್ಟೆಲ್ಲ ಬದಲಾವಣೆಗ ಅಗೊಳೊತ ಒಮ್ಮೆ ನಿಮ್ಮ ಬಾಲ್ಯದ ಆ ದಿನಗಳ್‌ನ ನೆನ್‌ಸಿಕಣಿ.

✍ಉಳುವಾರನ ರೋಶನ್ ವಸಂತ್.

# ಮನ್ಸ್ ಹೊರ್ತ್ ನೆಗಾಡಿ

ನೆಗೆ, ಇದ್ ಮೊನ್ಸರ ಕಾಯಿಲೆಗೆ ಒಂದ್ ತರದ ಮೊದ್ದು ಇದ್ದ ಹಂಗೆ. ಮೊನ್ಸರ್ ನೆಗಾಡುವೆ ಬೇರೆವರ ನೆಗಡ್ಸುವೆ, ಹಂಗೆ ಪ್ರಾಣಿಗ ನೆಗಡ್ದರ ನಾವ್ ನೋಡ್ದ್ ಉಟ್ಟಾ? ನಾವ್ ಸಾಂಕಿದ ನಾಯಿನ ಕೊಂಡಾಟ ಮಾಡಿರು ಅದರ ಒಟ್ಟಿಗೆ ಆಟ ಆಡಿರೂ ನಾಯಿ ನಮ್ಮ ನೋಡಿ ನೆಗಡ್ದುಲೆ.ಯಾರೊ ಹೇಳ್ದರ ಕೇಳ್ದೆ: ಮೃಗಾಲಯತ ಹೇಳಿರೆ ಮೊನ್ಸರ ಚಿತ್ರ ವಿಚಿತ್ರ ಕೋಲಗಳ ಪ್ರಾಣಿಗ ನೋಡ್‌ವ ಜಾಗೆತ. ಎಷ್ಟ್ ಹಾಸ್ಯದ ಮಾತ್ ಅದ್. ಅಷ್ಟೇ ಸತ್ಯನೂ ಹೌದು. ಮೊನ್ಸರ್‌ಗೆ ನೆಗೆ ಕೊಟ್ಟದ್ ದೇವುರು ಬೇಜರನ ಕೊಟ್ಟದ್ ದೇವುರು. ನೆಗೆ ದೈವ ದತ್ತ. ಸಣ್ಣ ಮಕ್ಕಳ ನೆಗೆ ನೋಡಿ ಕುಸಿ ಪಡದವ್ ಯಾರ್ ಒಳೊ ?

ಹೆತ್ತ ಅಯ್ಯೆಗೆ ಎಷ್ಟೇ ಬೇನೆ-ಬೇಜರಗ ಇದ್ದರು ಕೂಸುನ ನೆಗೆ ನೋಡ್‌ಕನ ಅದರೆಲ್ಲ ಮರ್ತ್ ಕುದ್ದದೆ. ಆಗ ಗೊತ್ತಾದೆ ನೆಗೆಗೆ ಎಷ್ಟ್ ಬೆಲೆ ಉಟ್ಟ್‌ತ. ಒಬೊಬ್ಬ ಒಂದೊಂದ್ ತರಲಿ ನೆಗಡುವೆ. ಹಿಯಾಳ್ಸಿ ನೆಗಡ್ದು ಹಗೆ ಇಸಿಕಂಡ್ ನೆಗಡ್ದು, ಬೇರೆವರ ಚಾಡಿ ಮಾತ್‌ಗಳ ಹೇಳಿಕಂಡ್ ನೆಗಡ್ದು. ಇಂತ ನೆಗೆ ನಗಡ್‌ಕನ ನಾವ್ ಸುಮ್ಮನಿರ್ದು ಒಳ್ಳದ್.

ನೆಗೆಂದ ಕೂಡ್ದ ಮೋರೆಗಳ ನೋಡಿಕೆ ಕುಸಿ ಆದೆ. ಮೊನ್ಸರ ಭಾವನೆಗಳ ತೋರ್ಸಿ ಕೊಡ್ದು ನೆಗೆ ತಾತ್ಸರದ ನೆಗೆ. ಹಗೆನ ತೋರ್ಸುವ ನೆಗೆ. ಮನ್ಸ್‌ಗೆ ಕುಸಿ ಇಲ್ಲದಿರ್‌ಕನ ನೆಗಡುವ ಚಪ್ಪೆ ನೆಗೆ ಇದರ ಪರ್ಚಯ ಎಲ್ಲವ್ಕ ಇದ್ದದೆ. ಯಾರಾರ್ ಎಡ್ಗಿ ಬೀಳ್‌ಕನ ಇನ್ಸ್ ಕೆಲವ್ ಅಲ್ಲದ ಸೊಲ್ಲದ ಬಟ್ಟೆಗಳ ಹಾಕೆಂಡ್ ಕೋಲ ಕಟ್ಟ್‌ಕನ ನೋಡಿ ನೆಗಡೊವ್ ಇದ್ದವೆ. ಇನ್ಸ್ ಕೆಲವ್ ಮೊನ್ಸರ್ ಹಾಸ್ಯ ಪ್ರಸಂಗಗಳ ಹೇಳಿಕಂಡ್ ಹಗ್‌ಲ್ ಹೊತ್ತ್‌ಲಿ ನೆಗಡಿರೆ ಕೆಲವ್ ನಿದ್ದೆ ಹೊತ್ತ್‌ಲಿ ಗೋಡೆಗೆ ಒದ್ದ್‌ಕಂಡ್ ನೆಗಾಡೊವ್ ಒಳೊ. ಇನ್ಸ್ ಕೆಲವ್ ಎಲ್ಲವರ ನೆಗೆ ನಿತ್ತ ಮೇಲೆ ನೆಗಾಡಿಕೆ ಸುರು ಮಾಡೊವ್ ಒಳೊ, ತಾನ್ ನೆಗಾಡಿ ಬೇರೆವರ ನೆಗಾಡ್ಸೊವ್ ಹಾಸ್ಯಗಾರರ್. ಕಾರಣಗಳ ಅರ್ಥ ಮಾಡಿಕಂಡ್ ನೆಗಾಡೊವ್ ಜ್ಞಾನಿಗ. ಬೇರೆವ್ಕೆ ಬೇನೆ ಆಗ್‌ವ ಹಂಗೆ ನೆಗಾಡೊವ್ ಹಾಂಕಾರಿಗ. ಕಾರಣ ಇಲ್ಲದೆ ನೆಗಾಡೊವ್ ಹುಚ್ಚರ್. ಯಾವುದೇ ಕಾರಣಕ್ಕೂ ನೆಗಾಡದವ್ ಮೊನ್ಸರೆ ಅಲ್ಲ. ನಾವ್ ಪರ್ಚಯ ಇಲ್ಲದವರ ಮಾತಾಡ್ಸ್‌ಕನ ಸುರುಗೆ ನೆಗೆನ ಮೂಲಕ ಮಾತಾಡ್ಸುವೆ. ಆಗ ನಾವ್ಗೆ ತುಂಬಾ ಆತ್ಮೀಯರ್ ಆದವೆ.

"ನಕ್ಕು ನಗಿಸುವ ನಗೆ ಲೇಸು
ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ"
ಇದ್ ಸರ್ವಜ್ಞನ ಮಾತ್.



5

“ನಗೆಯಲ್ಲಿ ಹೊಗಿಬ್ಯಾಡ
ಹೊಗಿ ಹಿಂದೆ ಧಗಿ ಬ್ಯಾಡ
ಬಾಳಿಗೆ ಎರಡು ಬಗಿಬ್ಯಾಡ, ನನ ಗೆಳೆಯ
ಬ್ಯಾಸರಿಕೆ ಬ್ಯಾಡೋ ನಗುವಾಗ”

ಇದ್ ಕುಹಕ ನೆಗೆನ ಖಂಡಿಸಿ ಕವಿ ಬೇಂದ್ರೆ ಬರ್ದರೆ

ನಗುವು ಸಹಜ ಧರ್ಮ
ನಗಿಸುವುದು ಪರ ಧರ್ಮ
ನಗುವ ಕೇಳುತ ನಗುವುದತಿಶಯದ ಧರ್ಮ

ಡಿ.ವಿ.ಜಿ ಯವ್ ನೆಗೆನ ಹೊಗುಳಿ ಬರ್ದೊ.

ನೆಗೆ ಮೊನ್ಸರ ಜೀವನಕ್ಕೆ ಎಷ್ಟೊಳ್ಳದ್ ತ ಹೇಳಿರೆ ಸಾವುನ ಕೂಡ ದೂರ ಮಾಡ್ದೆ. ಇದ್ಕೆ ಉದಾಹರಣೆ ಆಗಿ:

ಪತ್ರಿಕಾ ಬರಹಗಾರ ಆಗಿದ್ದ “ನಾರ್ಮನ್ ಕಸಿನ್ಸ್” ನವ್ ದೊಡ್ಡ ಕಾಯಿಲೆಲಿ ಬಿದ್ದಿದ್ದೊ. ಆರ್ ತಿಂಗಳ್‌ಂದ ಹೆಚ್ಚಿ ಸಮಯ ಬೊದ್ಕಿಕಿಲೆ ತ ಡಾಕ್ಟರ್ ಹೇಳಿದ್ದೊ. ಅವರ ಬೇನೆಗೆ ಎಷ್ಟೇ ಮೊದ್ದು ಮಾಡಿರು ಅವರ ಬೇನೆ ಕಡ್ಮೆ ಆಗದೆ ನಿದ್ದೆನೂ ಬರ್ತಿತ್ಲೆ.

ಒಮ್ಮೆ ಆಕಸ್ಮಿಕವಾಗಿ ಹಾಸ್ಯ ಚಲನ ಚಿತ್ರ ನೊಡಿ ಹೊಟ್ಟೆ ಅಲ್ಲುಗವ ಹಂಗೆ ನೆಗಡ್ದೊ. ಸುಮಾರ್ ಎರ್ಡ್ ಗಂಟೆ ಬೇನೆ ಇಲ್ಲದೆ ನಿದ್ದೆ ಮಾಡಿ ಮತ್ತೊಮ್ಮೆ ನೋಡಿ ಎರ್ಡ್ ಗಂಟೆ ಬೇನೆ ಇಲ್ಲದೆ ನಿದ್ದೆ ಮಾಡ್ದೊ. ಅಂದ್‌ಂದ ನೆಗಾಡ್‌ವಂತ ಚಲನ ಚಿತ್ರ ಪುಸ್ತಕಗಳ ತಂದ್ ನೆಗಾಡಿಕೆ ಸುರು ಮಾಡ್ದೊ ಗಡ.

ಆರ್ ತಿಂಗಲ್ಲಿ ಸತ್ತ್ ಹೋದವೆತ ಡಾಕ್ಟರ್ ಹೇಳ್ದ ಮಾತ್‌ನ ಸುಳ್ಳಾಗಿಸಿ ಇಪ್ಪತ್ತ್ ವರ್ಷಂದ ಹೆಚ್ಚ್‌ಕಾಲ ಬೊದ್ಕಿದೊ. ನಾರ್ಮನನವ್ ಮೊನ್ಸರ ಜೀವಕ್ಕೆ ನೆಗೆ ಒಳ್ಳೆ ಮೊದ್ದುತ ಹೇಳ್ವ ಮಾತ್‌ನ ಚಾಲ್ತಿಗೆ ತಂದೊ. ಕಡೆಗೆ ಅವ್ ಸತ್ತ್ ಹೋದ್ ಅವರ ಕಾಯಿಲೆಂದ ಅಲ್ಲ ! ಹೃದಯಘಾತಂದ !

ಕೆಲವ್ಕೆ ಒಳಗೊಳಗೆ ನೆಗೆ, ಎದ್ದ್ ಬಿದ್ದ್ ನೆಗೆ, ಕದ್ದ್ ಕದ್ದ್ ನೆಗೆ, ಸೋತ ನೆಗೆ, ಹೂ ನೆಗೆ, ವಿಷಾದದ ನೆಗೆ, ಕಣ್ಣ್‌ಲಿ ನೆಗೆ, ತುಂಟ ನೆಗೆ, ತುಟಿಲಿ ನೆಗೆ, ಮೋರೆಲಿ ನೆಗೆ.

ಹಿಂಗೆ ನೆಗೆಲೂ ತುಂಬಾ ತರತರದ ನೆಗೆ ಉಟ್ಟು. ಆದರೆ ಎಲ್ಲಿ ನೆಗಾಡೊಕೊ ಅಲ್ಲೇ ನೆಗಾಡೊಕು. ಹಂಗೆ ಎಲ್ಲಿ ನೆಗಾಡಿಕೆ ಆಗದೊ ಅಲ್ಲಿ ನೆಗಾಡಿರೆ ಸಂಸಯಕೆ ಕಾರಣ ಆದೆ. ಇನ್ನೊಬ್ಬಂಗೆ ಬೇನೆ ಆಗ್‌ವ ಹಂಗೆ ಕುಹಕ ಹಿಯಾಳ್ಸಿ ಹಾಂಕಾರ

ತೋರ್ಸಿ ನೆಗಾಡ್ದು ಒಳ್ಳದಲ್ಲ. ಮಹಾಭಾರತದ ರಾಜಸೂಯ ಯಾಗಕ್ಕೆ ಧರ್ಮರಾಯನ ಮನೆಗೆ ಹೋಗ್ತ ಇದ್ದಾಂಗೆ ದುರ್ಯೋಧನ ಕಾಲ್ ಜಾರಿ ಬಿದ್ದದರ ನೋಡ್ದ ದ್ರೌಪದಿ ಕುಹಕ ನೆಗೆನ ನೆಗಾಡಿ ಎಷ್ಟಾರ್ ಕುರುಡನ ಮಂಙ ತಾನೆ? ಹಿಯಾಳ್ಸಿ ಮಾತಡ್ದ ಮಾತ್ ದುರ್ಯೊದನಂಗೆ ದ್ವೇಷದ ಬೀಜ ಬಿತ್ತಿ ಮಹಾಭಾರತದ ಯುದ್ಧಕ್ಕೆ ಕಾರಣ ಆತ್. ಇದರ ನಾವ್ ನೆಂಪುಲಿ ಇಸಿಕಣೊಕು. ಯಾರಿಗೂ ಬೇನೆ ಆಗದ ಹಂಗೆ ನೆಗಾಡಿರೆ ನಮ್ಮ ಮನ್ಸಿಗೂ ಅವರ ಮನ್ಸಿಗೂ ಕುಸಿ ಆದೆ. ಮನ್ಸ್‌ಗೆ ಕುಸಿ ಆಗುವ ನೆಗೆ ಮಕ್ಕಳ ನೆಗೆ. ಅಂತ ನೆಗೆನ ನಾವ್ ಕಲ್ತ್‌ಕಣೊಕು. ಇಂದ್‌ನ ಕಾಲಲಿ ಮೊನ್ಸನ ಮನ್ಸ್ ಎಲ್ಲೆಲ್ಲೋ ಮರ್ತ್ ಹೋಗಿ ಒತ್ತಡಲಿ ಸಿಕ್ಕಿ ಹಾಕಂಡ್ ನೆಗೆನೇ ಮರ್ತ್ ಹೋಗುವ ಹಂಗೆ ಆವುಟು. ಈ ಒತ್ತಡಂದ ಬುಡ್ಸಿಕಂಬಕೆ ಒಂದೇ ಒಂದ್ ದಾರಿ ನೆಗೆ.

ನೆಗಾಡಿಕಂಡ್ ಇರುವ ಮೊನ್ಸರ ನೋಡ್‌ಕನ ಅವನ ಮನ್ಸಿಗೆ ಸಮಾಧಾನ ಉಟ್ಟುತ ಗೊತ್ತಾದೆ. ನಾವ್ ಎಷ್ಟೇ ಪೊರ್ಲು ಇದ್ದರು ಎಷ್ಟೇ ಲಾಯ್ಕನ ಬಟ್ಟೆ ಚಿನ್ನ ಹಾಕಿ ಕೈ ತುಂಬ ದುಡ್ಡ್ ಇದ್ದ್ ಮೋರೆಲಿ ನೆಗೆ ಇಲ್ಲದರೆ ಎಲ್ಲ ವ್ಯರ್ಥ. "ನಗುವಿಲ್ಲದ ಜೀವನ ಬೆಳದಿಂಗಳಿಲ್ಲದ ಹುಣ್ಣಿಮೆಯಂತೆ"

ಎಲ್ಲವು ಒಂದೇ ಬಾಸೆಲಿ ನೆಗಾಡುವೆ. ನೆಗೆ ಆತ್ಮದ ಸಂಗೀತ. ನೆಗಾಡ್ಸುದು ಒಂದ್ ಕಲೆ. ಇದರ್‌ಂದ ಲಾಭ ಹೊರ್ತ್ ನಷ್ಟ ಇಲ್ಲೆ.

ನೆಗಾಡ್‌ಕನ ಮನ್ಸ್ ಹೊರ್ತ್ ನೆಗಾಡಿ. ನೆಗೆಗೆ ದುಡ್ಡ್ ಬೇಡ. ತುಂಬ ಶಕ್ತಿನು ಬೇಡ, ಶಕ್ತಿ ಉಟ್ಟುತ ಕೃತಕ ನೆಗೆ ಬೇಡ. ಇದರ್‌ಂದ ಯಾವ ಲಾಭನೂ ಇಲ್ಲೇ. "ಸ್ಮಿತರವಿರಲಿ ವದನದಲಿ, ನಗುವು ಕೇಳಿಸದಿರಲಿ ಹಿತವಿರಲಿ ವಚನದಲಿ ಋತುವ ಬಿಡದಿರಲಿ ಮಿತಿ ಇರಲಿ ಮನಸಿನುದ್ವೇಗದಲಿ ಭೋಗದಲಿ ಅತಿ ಬೇಡವೆಲ್ಲಿಯು ಮಂಕುತಿಮ್ಮ" ಬೊದ್ಕುಲಿ ಎಷ್ಟೇ ಬೇನೆ–ಬೇಜರ ಸುಖ–ಕಷ್ಟ ಇರ್‌ಲಿ. ಮೋರೆಲಿ ಯಾಗೋಳ್ ನೆಗೆ ಇರ್‌ಲಿ. ಬೇನೆತ ಹೇಳ್‌ವ ಸಮುದ್ರನ ದಾಟಿಕೆ ನೆಗೆತ ಹೇಳ್‌ವ ಹಡ್ಗ್ ಯಾಗೋಳೀಗೂ ಉಪಕಾರ ಮಾಡ್ದೆ. ಬನ್ನಿ ಎಲ್ಲವ್ ಒಟ್ಟಿಗೆ ಸೇರಿ ಹೃತ್ಪೂರ್ವಕವಾಗಿ ನೆಗಾಡೊಮೊ.

✍ಉದಯಕುಮಾರಿ, ಚೆಂಬು.

ಮಾಳಿಗ ಮನೆ, ಎಂ. ಚೆಂಬು ಗ್ರಾಮ,
ಬಾಲಂಬಿ ಅಂಚೆ, ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ.
ಮೊ. ನಂ. 9632900436.

# ಭಾಷಾ ಸೌಹಾರ್ದ ಸಂಭ್ರಮ

ಸುಳ್ಯಲಿ 2018ರ ಜನವರಿ 22 ರಂದ್ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಹೊಸ ಆಡಳಿತ ಮಂಡಲಿ ವತಿಂದ ಚೊಚ್ಚಲ ಸಮಾರಂಭ ನಡ್ತ್. ಸುಳ್ಯದ ದುರ್ಗಾ ಪರಮೇಶ್ವರಿ ಕಲಾ ಮಂದಿರಲಿ ನಡ್ದ 'ಅರೆಭಾಷೆ ಭಾಷಾ ಸೌಹಾರ್ದ ಸಂಭ್ರಮ' ಮತ್ತೆ ಹೊಸ ಅಧ್ಯಕ್ಷ ಅಲ್ಲದೆ, ಸದಸ್ಯರಿಗೆ ಅಭಿನಂದನಾ ಸಮಾರಂಭನ ದ.ಕ. ಉಸ್ತುವಾರಿ ಸಚಿವ ಬಿ. ರಮಾನಾಥ ರೈ ಉದ್ಘಾಟಿಸಿದೊ. 'ಭಾಷಾ ಸೌಹಾರ್ದಂದ ಮತೀಯ ಸಾಮರಸ್ಯ ಸಾಧ್ಯತ' ಸಚಿವರು ಸಮಾರಂಭನ ಉದ್ಘಾಟಿಸಿ ಹೇಳ್ದೊ.

ಕಾರ್ಯಕ್ರಮದ ಅಧ್ಯಕ್ಷತೆನ ಅಕಾಡೆಮಿನ ನೂತನ ಅಧ್ಯಕ್ಷ ಪಿ.ಸಿ. ಜಯರಾಮನವು ವಹಿಸಿದ್ದೊ. ತಾಲೂಕು ಅಕ್ಷರ ದಾಸೋಹ ಅಧಿಕಾರಿ ಚಂದ್ರಶೇಖರ ಪೇರಾಲು 'ಅರೆಬಾಷೆ ಮತ್ತೆ ಸಂಸ್ಕೃತಿ' ತ್ತೇಳುವ ಬಗ್ಗೆ ವಿಚಾರ ಮಂಡಿಸಿದೊ. ಅತಿಥಿಗಳಾಗಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ನಿಕಟ ಪೂರ್ವ ಅಧ್ಯಕ್ಷ ಕೊಲ್ಯದ ಗಿರೀಶ್, ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್‌ನ ಅಧ್ಯಕ್ಷ ಡಾ. ಕೆ.ವಿ. ಚಿದಾನಂದ, ಕುಕ್ಕೆ ಶ್ರೀ ಸುಬ್ರಮಣ್ಯ ದೇವಸ್ಥಾನದ ವ್ಯವಸ್ಥಾಪನ ಸಮಿತಿಯ ಅಧ್ಯಕ್ಷ ನಿತ್ಯಾನಂದ ಮುಂಡೋಡಿ, ಸುಳ್ಯದ ಗೌಡ ಯುವ ಸೇವಾ ಸಂಘದ ಅಧ್ಯಕ್ಷರಾದ ದಿನೇಶ ಮಡಪ್ಪಾಡಿ ಇವೆಲ್ಲ ಮುಖ್ಯ ನಂಟ್ರಾಗಿ ಸಮಾರಂಭಕ್ಕೆ ಬಂದ್ ಸಭೆನ ಚೆಂದಗಾಣಿಸಿದೊ. ವೇದಿಕೆಲಿ ಸುಳ್ಯದ ಪ್ರಮುಖರ್ ಗೌರವ ಉಪಸ್ಥಿತಿ ಸ್ಥಾನದಲ್ಲಿದ್ದೊ. ಅಲ್ಲದೆ ಅಕಾಡೆಮಿನ ನೂತನ ಸದಸ್ಯರ್ ಉಪಸ್ಥಿತರಿದ್ದೊ.

ಈ ಸಂದರ್ಭಲಿ ಸಚಿವ ರಮಾನಾಥ ರೈಯವು ಅಧ್ಯಕ್ಷ ಮತ್ತೆ ಸದಸ್ಯರಿಗೆ ಗುರುತು ಚೀಟಿ ಕೊಟ್ಟ್ ಅಭಿನಂದಿಸಿದೊ. ಸುರೂಲಿ ಅಕಾಡೆಮಿನ ನೂತನ ಸದಸ್ಯೆ ಕಡ್ಲೆರ ತುಳಸಿ ಮೋಹನ್‌ನವು ಪ್ರಾರ್ಥಿಸಿರೆ, ಅಕಾಡೆಮಿನ ರಿಜಿಸ್ಟ್ರಾರ್ ಉಮರಬ್ಬನವು ಸ್ವಾಗತಿಸಿದೊ. ಶಶಿಧರ ಮಾವಿನಕಟ್ಟೆ ಅವು ಕಾರ್ಯಕ್ರಮ ನಿರೂಪಿಸಿದೊ.

ಮಧ್ಯಾಹ್ನದ ಊಟ ಆದ ಮೇಲೆ ಬಹುಭಾಷಾ ಕವಿಗೋಷ್ಠಿ ನಡ್ತ್. ಕವಿಗೋಷ್ಠಿಲಿ ಅರೆಬಾಸೆಲಿ ಜಯಮ್ಮ ಚೆಟ್ಟಿಮಾಡ, ಕನ್ನಡಲಿ ರಮ್ಯ ದಿಲೀಪ್, ಕೊಡವ ಭಾಷೆಲಿ ಶೋಭಾ ಸುಬ್ಬಯ್ಯ, ಬ್ಯಾರಿ ಭಾಷೆಲಿ ಬಶೀರ್ ಅಹಮದ್, ತುಳುಭಾಷೆಲಿ ರಮೇಶ್ ಮೆಟ್ಟಿನಡ್ಕ ಕೊಂಕಣಿ ಭಾಷೆಲಿ ಕೈಲಾಸ್ ಶೆಣೈ ಕವನ ವಾಚಿಸಿದೊ. ಸಂಗೀತದ ಮೆರಗ್ ಕೊಟ್ಟ್ ಮನರಂಜಿಸಿದೊ. ಮರಗೋಡು ಅರುಣೋದಯ ಕಲಾತಂಡಂದ ಸಾಂಸ್ಕೃತಿಕ ಕಾರ್ಯಕ್ರಮ ನಡ್ತ್. ಕಡೆಗೆ ಅಕಾಡೆಮಿನ ನೂತನ ಸದಸ್ಯ ಮಾಧವಗೌಡನವು ಸರ್ವರ್‌ನ ವಂದಿಸಿದೊ.

# ಕವನ – ಕುಂಚ ಕಾರ್ಯಕ್ರಮ–2018

ತಾರೀಕ್ 02–03–2018ರ ಶುಕ್ರವಾರದಂದ್ ಕೊಡಗು ಗೌಡ ವಿದ್ಯಾ ಸಂಘದ ಸಭಾಂಗಣಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ವತಿಂದ ಕವನ–ಕುಂಚ ಕಾರ್ಯಕ್ರಮ ಯಶಸ್ವಿಯಾಗಿ ನಡ್ತ್. ಮಡಿಕೇರಿ ವಿಧಾನಸಭಾ ಕ್ಷೇತ್ರದ ಶಾಸಕ ಅಪ್ಪಚ್ಚು ರಂಜನ್ ಸಮಾರಂಭ ಉದ್ಘಾಟಿಸಿದೊ. ಅಧ್ಯಕ್ಷ ಪಿ.ಸಿ. ಜಯರಾಮನವರ ನೇತೃತ್ವದ ಹೊಸ ಆಡಳಿತ ಮಂಡಲಿ ಕೊಡಗ್‌ಲಿ ಆಯೋಜಿಸಿದ್ದ ಸುರೂನ ಕಾರ್ಯಕ್ರಮ ಪ್ರೇಕ್ಷಕರ ಮನ್ಸ್‌ನ ಗೆದ್ದತ್.

ಕವಿಗ ಕವನ ಓದುತ್ತಿದ್ದಂಗೆ ಅದರ ಒಳಾರ್ಥನ ಆ ಕೂಡಲೆ ಚಿತ್ರ ಬುಡ್ಸುದೇ ಕವನ ಕುಂಚ ಕಾರ್ಯಕ್ರಮ. ಎಂಟ್ ಜನ ಆಹ್ವಾನಿತ ಕವಿಗಳ ಕವನಕ್ಕೆ ಇಬ್ಬರ್ ಕಲಾವಿದರ್ ಚಿತ್ರ ಬುಡ್ಸಿದೊ.

ಡಾ. ಕರುಣಾಕರ ನಿಡಿಂಜಿ, ತೆಕ್ಕಡೆ ಕುಮಾರಸ್ವಾಮಿ, ಶಿವದೇವಿ ಅವನಿಶ್ಚಂದ್ರ, ಸೆಟ್ಟಿಜನ ಗೀತಾ ಪದ್ಮನಾಭ, ಕುಲ್ಲಚನ ಕಾರ್ಯಪ್ಪ, ಬಾರಿಕೆ ಶೈಲಜ ದಿನೇಶ್, ಎಸ್.ಕೆ. ಈಶ್ವರಿ ಮತ್ತೆ ಮಾಧವ ಚೆಂಬು ಇವ್ ತಮ್ಮ ಸ್ವರಚಿತ ಕವನ ವಾಚಿಸಿದೊ. ಅವರ ಕವನಗಳಿಗೆ ಜನರಲ್ ಕೆ.ಎಸ್. ತಿಮ್ಮಯ್ಯ ಪಬ್ಲಿಕ್ ಸ್ಕೂಲ್‌ನ ಚಿತ್ರ ಕಲಾವಿದ ಕೋಡಿ ಭರತ್ ಮತ್ತೆ ಯುವ ಚಿತ್ರ ಕಲಾವಿದ ಕೌಶಿಕ್ ಮೂಡಗದ್ದೆ ಇವು ಅರ್ಥಗರ್ಭಿತವಾದ ಚಿತ್ರ ಬುಡ್ಸಿದೊ. ಮಂಗಳೂರು ಸಂತ ಅಲೋಸಿಯಸ್ ಕಾಲೇಜ್‌ನ ಪ್ರಾಧ್ಯಾಪಕ ಡಾ. ವಿಶ್ವನಾಥ ಬದಿಕಾನನವು ಮುಖ್ಯ ಭಾಷಣ ಮಾಡ್ದೊ.

ಕೊಲ್ಯದ ಗಿರೀಶ್‌ನವು ಅಧ್ಯಕ್ಷರಾಗಿದ್ದ ಮೂರು ವರ್ಷಲಿ ಅಕಾಡೆಮಿ ಮಾಡ್ದ ಕಾರ್ಯಕ್ರಮಗಳ ಮಾಹಿತಿ "ಸಫಲ" ಪುಸ್ತಕನ ವಿಧಾನ ಪರಿಷತ್ ಸದಸ್ಯೆ ಶಾಂತೆಯಂಡ ವೀಣಾ ಅಚ್ಚಯ್ಯ ಬುಡುಗಡೆ ಮಾಡ್ದೊ. ಮಡಿಕೇರಿ ತಾಲೂಕು ಪಂಚಾಯಿತಿ ಅಧ್ಯಕ್ಷೆ ತೆಕ್ಕಡೆ ಶೋಭ ಮೋಹನ್, ಮಡಿಕೇರಿ ನಗರಸಭಾ ಅಧ್ಯಕ್ಷೆ ಕಾವೇರಮ್ಮ ಸೋಮಣ್ಣ, ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷ ಕೊಲ್ಯದ ಗಿರೀಶ್, ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷ ಹೊಸೂರು ರಮೇಶ್ ಜೋಯಪ್ಪ, ಕೊಡಗು ಗೌಡ ಸಮಾಜ ಅಧ್ಯಕ್ಷ ಪೇರಿಯನ ಜಯಾನಂದ, ಕೊಡಗು ಗೌಡ ಮಹಿಳಾ ಒಕ್ಕೂಟ ಅಧ್ಯಕ್ಷೆ ಕುಂಜಿಲನ ಮುತ್ತಮ್ಮ, ಕೊಡಗು ಗೌಡ ಯುವ ವೇದಿಕೆ ಅಧ್ಯಕ್ಷ ಪೈಕೇರ ಮನೋಹರ್ ಮಾದಪ್ಪ ಇವೆಲ್ಲವು ಮಾತಾಡ್ದೊ. ಕೊಡಗು ಗೌಡ ಸಮಾಜಗಳ ಒಕ್ಕೂಟದ ಅಧ್ಯಕ್ಷ ಸೂರ್ತಲೆ ಸೋಮಣ್ಣ, ಅಕಾಡೆಮಿ ಸದಸ್ಯ ಕಾನೆಹಿತ್ಲು ಮೊಣ್ಣಪ್ಪ, ಎ.ಕೆ. ಹಿಮಕರ, ಪರಶುರಾಮ ಚಿಲ್ತಡ್ಕ ಉಪಸ್ಥಿತರಿದ್ದೊ.

ಸುರೂಲಿ ರಿಜಿಸ್ಟ್ರಾರ್ ಉಮರಬ್ಬನವು ಸ್ವಾಗತಿಸಿದೊ. ಅಕಾಡೆಮಿ ಸದಸ್ಯೆ ಕಡ್ಲೇರ ತುಳಸಿ ಮೋಹನ್ ಪ್ರಾರ್ಥಿಸಿದೊ. ಅಕಾಡೆಮಿ ಸದಸ್ಯ ಬೇಕಲ್ ದೇವರಾಜ್ ಕಾರ್ಯಕ್ರಮ ನಿರೂಪಿಸಿದೊ. ಕಡೆಗೆ ಕುಂಬಗೌಡನ ಪ್ರಸನ್ನ ವಂದಿಸಿದೊ. ಕಾರ್ಯಕ್ರಮದ ಸಂಚಾಲಕರಾಗಿ ಬಾರಿಯಂಡ ಜೋಯಪ್ಪ ಮತ್ತೆ ಕಡ್ಲೇರ ತುಳಸಿ ಮೋಹನ್ ಕಾರ್ಯಕ್ರಮ ನಿರ್ವಹಿಸಿದೊ.

# ಗೌಡ ಜನಾಂಗಲಿ ಕಂಡ್ ಬರುವ ಕೆಲವ್ ನಂಬಿಕೆಗ

1) ಮರಕುಟುಗ ಹಕ್ಕಿ ಮೀಮೀ ಮರ್ಟರೆ ಸನಿ
2) ಮನೆಲಿ ಉದ್ದ ಕಂಡಂಬು ಮಾಡ್‌ಕಾಗದ್
3) ಒಲೆಲಿ ನೀರ್‌ನ ಕುದ್‌ಸಕಾದ್
4) ಮೈಮೇಲೆ ಸುಮ್ಮನೆ ಬೆಳಿ ಬಟ್ಟೆನ ಹೊದ್ದ್‌ಕಂಬಕಾಗದ್
5) ರಾತ್ರೆ ಕನ್ಸ್‌ಲಿ ಕೋಣ ಕಾಂಬಕಾಗದ್ ಮತ್ತೆ ಕಾಗೆನ ಕನ್ಸ್ ಬಿದ್ದರೆ ಸನಿಗಡ
6) ಮೈಲಿ ಬಟ್ಟೆ ಹರೆಯಾಕಾದ್
7) ಇಂಬೊತ್ತ್ ಸಮೆಲಿ ಮಲಗಾಕಾದ್
8) ಮಂಗಳವಾರ ಚವರ ಮತ್ತೆ ತಲೆಕೂದಲ್ ತೆಗ್ಸಕಾದ್ ಗಡ
9) ಮಧ್ಯಾನದ ಮೇಲೆ ಬಾಳೆಗೊನೆ ಕಡಿಯಕಾದ್
10) ಸೋಮಾರ ಎತ್ತುಗಳ್‌ಲಿ ಹೂಡಕಾದ್
11) ಮನೆಂದ ಹೊರಡ್‌ಕನ ಹೋನೆತಾ ಹೇಳಿಕಾದ್, ಹೋಗಿ ಬನ್ನೆತಾ ಹೇಳೊಕು
12) ಅಪ್ಪನೊ ಅವ್ವನೊ ಸತ್ತರೆ ಅದೇ ವರ್ಷ ಮದುವೆ ಆಕು. ಇಲ್ಲರೆ ಮೂರು ವರ್ಷ ಮೊದುವೆ ಆಕಾದ್‌ಗಡ
13) ದವಡೆಗೆ ಕೈ ಕೊಟ್ಟ್ ಕಂಡ್ ಮೊಣಕಾಲ್ ಊರಿಕಂಡ್ ಕೂರಿಕಾದ್
14) ಹಾಲ್‌ನ ಮಜ್ಜಿಗೆನ ಒಟ್ಟಿಗೆ ಕೊಡಕಾದ್
15) ಎಲ್ಲಾರ್ ಹೋಕನ ಕಾಗೆನ ಕಂಡರೆ ಅಪಶಕುನ, ಚೊಂಬುಕ್ಕನ ಕಂಡರೆ ಒಳ್ಳದ್ ಗಡ.
16) ಮಧ್ಯಾನದ ಮೇಲೆ ಹಾಲ್ ಮಜ್ಜಿಗೆ ತಕ್ಕಂಡ್ ಹೋಕಾದ್
17) ಒಟ್ಟಿಗೆ ಜೋಡು ಗುಂಡು ಹೊಡೆಯಕಾದ್, ಅದ್ ಸಾವುಲಿ ಮಾತ್ರ ಹೊಡಿಯದು
18) ಮನೆಂದ ಶುಭಾ ಕಾರ್ಯಕ್ಕೆ ಹೋಕನ ಕಾಲಿ ಬಿಂದಿಗೆ ನೋಡಿಕಾದ್‌ಗಡ
19) ಕೈಂದ ಕೈಗೆ ಉಪ್ಪು ಕೊಟ್ಟರೆ ಜಗಳ ಬಂದದೆಗಡ

✍ ಉಳುವಾರನ ರಾಣಿ ವಸಂತ್

ಕಾಂತೂರು ಗ್ರಾಮ,
ಮೂರ್ನಾಡ್ ಅಂಚೆ.
ಮೊ. ನಂ 9611554193

# ಅಕಾಡೆಮಿನ ಹೊಸ ಆಡಳಿತ ಮಂಡಲಿ

[ಅಧಿಕಾರವಧಿ 2017 ಡಿಸೆಂಬರ್‌ಂದ 2020ರವರೆಗೆ]

## ಅಧ್ಯಕ್ಷರ್



### ಶ್ರೀ ಪಿ.ಸಿ. ಜಯರಾಮ

ಶ್ರೀ ಪಿ.ಸಿ. ಜಯರಾಮನವು ದ. ಕನ್ನಡ ಜಿಲ್ಲೆ ಸುಳ್ಯ ತಾಲೂಕ್‌ನ ಶ್ರೀ ಪಾಲ್ತಾಡು ಚಿನ್ನಪ್ಪ ಮತ್ತೆ ಶ್ರೀಮತಿ ಕಮಲ ದಂಪತಿಗಳ ಮಂಜನಾಗಿ ಹುಟ್ಟಿದೊ.

ಇಸ್ಕೂಲ್ ಜೀವನಲಿ ಒಳ್ಳ ನಾಯಕತ್ವ ಗುಣನ ಮೈಗೂಡ್ಸಿಕಂಡ ಇವು ಬಿ.ಎ. ಪದವಿಧರ. ವೃತ್ತಿಲಿ ಕೃಷಿಕ ಮತ್ತೆ ವ್ಯಾಪಾರಸ್ಥರೂ ಹೌದು. ಶ್ರೀ ಜಯರಾಮನವು ಸಾರ್ವಜನಿಕ ಕೆಲ್ಸಲಿ ವಿಶೇಷ ಆಸಕ್ತಿ ಹೊಂದ್ಯೊಳೊ. ಸಹಕಾರಿ, ಪಂಚಾಯತ್ ರಾಜ್, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಲಿ ಇವು ಸೇವೆ ಮಾಡಿಕಂಡೊಳೊ.

ಮಡಪ್ಪಾಡಿ ಯುವಕ ಮಂಡಲದ ಅಧ್ಯಕ್ಷರಾಗಿ ಅದ್ಕೆ ಶಾಶ್ವತ ಸಭಾಭವನನ ಒದಗಿಸ್ಯೊಳೊ.

ಗ್ರಾಮ ಪಂಚಾಯ್ತ್‌ನ ಸದಸ್ಯರಾಗಿ, ಎರಡ್ ಸತಿ ತಾಲೂಕು ಪಂಚಾಯತ್ ಸದಸ್ಯರಾಗಿ ದುಡ್ದೊಳೊ. ಒಂದ್ ಸತಿ ಉಪಾಧ್ಯಕ್ಷರಾಗಿ, ಒಮ್ಮೆ ವಿಪಕ್ಷ ನಾಯಕರಾಗಿ ಕೆಲ್ಸ ಮಾಡಿಯೊಳೊ.

ಸುಳ್ಯಲಿ 1995ರ್ಲಿ ಸುರಾದ ಯುವ ಸೇವಾ ಸಂಘದ ಸ್ಥಾಪಕ ಕೋಶಾಧಿಕಾರಿಯಾಗಿ ಅಲ್ಲದೆ ಸುಳ್ಯದ ಗೌಡ ಸಮುದಾಯ ಭವನದ ನಿರ್ಮಾಣ ಸಮಿತಿಯ ಕೋಶಾಧ್ಯಕ್ಷರಾಗಿಯೂ ಸೇವೆ ಸಲ್‌ಸ್ತಾ ಒಳೊ.

1987 ರ್‌ಂದ ಇಲ್ಲಿಮುಟ್ಟ ಮಡಪ್ಪಾಡಿ ಸಹಕಾರಿ ಸಂಘದ ಅಧ್ಯಕ್ಷರಾಗಿ ಸೇವೆ ಮಾಡಿಕಂಡ್ ನಷ್ಟಲಿದ್ದ ಸಂಘನ ಬೆಳ್ಸಿ ಇಂದ್ ರಾಜ್ಯಮಟ್ಟಲಿ ಗುರ್ತುಸುವಂಗೆ ಮಾಡಿಯೊಳೊ.

1997ರ್‌ಲಿ ಗೌಡ ಯುವ ಸೇವಾ ಸಂಘ ಸುಳ್ಯಂದ ಪ್ರಾರಂಭಿಸಿದ ಶ್ರೀ ವೆಂಕಟರಮಣ ಕ್ರೆಡಿಟ್-ಕೋ-ಆಪರೇಟಿವ್ ಸೊಸೈಟಿನ ಸ್ಥಾಪಕ ಅಧ್ಯಕ್ಷರಾಗಿ ನಿರಂತರ ಹತ್ತ್ ವರ್ಷ ಕೆಲ್ಸಮಾಡಿ ಉತ್ತಮ ಅಡಿಪಾಯ ಹಾಕಿ, ಇಂದ್ ಅದ್ ರಾಜ್ಯವ್ಯಾಪಿ ಹತ್ತ್ ಶಾಖೆಗಳ ಹೊಂದಿ ನಿರಂತರ ಲಾಭಲಿ ನಡಿತಾ ಉಟ್ಟು. ಈಗಲೂ ಅದರ ನಿರ್ದೇಶಕರಾಗಿ ಕೆಲ್ಸ ಮಾಡ್ತಾ ಒಳೊ. ಟಿ.ಎ.ಪಿ.ಸಿ.ಯಂ.ಎಸ್. ಸುಳ್ಯ ಸ್ಕ್ಯಾಡ್ಸ್ ಮಂಗಳೂರ್‌ನ ನಿರ್ದೇಶಕರಾಗಿ ದುಡಿತಾ ಇರುವ ಇವ್ಕೆ ಇವರ

ಸೇವೆನ ಗುರ್ತಿಸಿ 64ನೇ ಅಖಿಲ ಭಾರತ ಸಹಕಾರಿ ಸಪ್ತಾಹಲಿ 'ಉತ್ತಮ ಸಹಕಾರಿ'ತ್ತೇಳುವ ಪ್ರಶಸ್ತಿ ಕೊಟ್ಟ್ ಸನ್ಮಾನಿಸಿಯೊಳೊ.

ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ, ಜನ ಜಾಗೃತಿ ವೇದಿಕೆ ಸುಳ್ಯ ತಾಲೂಕ್‌ನ ಅಧ್ಯಕ್ಷರಾಗಿ ದುಡ್ದ ಅನುಭವ ಉಟ್ಟು. ಸುಳ್ಯ ತಾಲೂಕು ಕನ್ನಡ ಸಾಹಿತ್ಯ ಪರಿಷತ್‌ನ ನಿರ್ದೇಶಕರಾಗಿ ಸೇವೆ ಸಲ್ಲಿಸಿಯೊಳೊ.

ಶ್ರೀಯುತರ ಧರ್ಮಪತ್ನಿ ಶ್ರೀಮತಿ ಉಷಾ. ಶ್ರೀಮತಿ ಉಷಾನವು ಮಡಪ್ಪಾಡಿ ಗ್ರಾಮ ಪಂಚಾಯತ್‌ನ ಅಧ್ಯಕ್ಷರಾಗಿ ಕೆಲ್ಸ ಮಾಡಿಯೊಳೊ. ಅಲ್ಲದೆ ಪಯಸ್ವಿನಿ ಸ್ತ್ರೀಶಕ್ತಿ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘದ ಸ್ಥಾಪಕ ಅಧ್ಯಕ್ಷೆಯಾಗಿಯೂ ಶ್ರೀಮತಿ ಉಷಾ ಅವು ಕೆಲ್ಸ ಮಾಡ್ತ ಒಳೊ.

ಮಂಜ ಸುಶಾನ್ ಎಂ.ಟೆಕ್. ವಿದ್ಯಾಭ್ಯಾಸ ಮಾಡಿಯೊಳೊ. ಹೆಣ್ಣ್‌ಮಕ್ಕ ಸೃಜನಾ ಎಂ.ಎಸ್ಸಿ. ವಿದ್ಯಾಭ್ಯಾಸ ಮಾಡಿರೆ, ಸ್ಪಂದನಾ ಇಂಜಿನಿಯರಿಂಗ್ ವ್ಯಾಸಂಗ ಮಾಡ್ತಾ ಉಟ್ಟು.

• • • • • • • • • • • • • •

## ಅಕಾಡೆಮಿನ ಸದಸ್ಯರ್ :

## ಶ್ರೀ ಮಾಧವ ಗೌಡ



ಇವು 23-06-1958 ರಂದ್ ಸುಳ್ಯ ತಾಲೋಕು ಮಲ್ಲಾರ ಮನೆ ಏನೆಕಲ್ಲು ಗ್ರಾಮದ ದಶರಥ ಗೌಡ ಮತ್ತೆ ಶೇಷಮ್ಮ ದಂಪತಿಗಳ 1ನೇ ಮಂಜನಾಗಿ ಹುಟ್ಟಿದೊ. ಏನೆಕಲ್ಲು ಮತ್ತೆ ಬೆಳ್ಳಾರೆ ಜೂನಿಯರ್ ಕಾಲೇಜ್‌ಲಿ ಕ್ರಮವಾಗಿ ಪ್ರಾಥಮಿಕ ಮತ್ತೆ ಪ್ರೌಢ ಶಿಕ್ಷಣನ ಮುಗ್ಸಿದೊ.

**ಸಾಮಾಜಿಕ ಕ್ಷೇತ್ರಲಿ ಇವು :**

ಹೊಟೇಲ್ ಯೂನಿಯನ್‌ನ ಅಧ್ಯಕ್ಷರಾಗಿ, ರಿಕ್ಷಾ ಚಾಲಕ, ಮಾಲಕ ಸಂಘದ ಕಾರ್ಯದರ್ಶಿಯಾಗಿ, ಕಾಮಧೇನು ಟ್ರೇಡರ್ಸ್‌ನ ಮಾಲಕರಾಗಿ, ಕಲ್ಪವೃಕ್ಷ ಫೈನಾನ್ಸ್ ಕಾರ್ಪೋರೇಶನ್‌ನ ವ್ಯವಸ್ಥಾಪಕರಾಗಿ, ಕಾಮಧೇನು ಗೋಲ್ಡ್ ಪ್ಯಾಲೇಸ್‌ನ ಮಾಲೀಕರಾಗಿ, ಸುಳ್ಯದ ಗೌಡ ಯುವ ವೇದಿಕೆಯ ನಿರ್ದೇಶಕರಾಗಿ, ವರ್ತಕರ ಸಂಘದ ನಿರ್ದೇಶಕರಾಗಿ, ಉತ್ಸಾಹಿ ಯುವಕ ಮಂಡಲದ ಸ್ಥಾಪಕ ಅಧ್ಯಕ್ಷರಾಗಿ, ಕಾಮಧೇನು ಕ್ರೆಡಿಟ್ ಸೌಹಾರ್ದ ಸಹಕಾರಿ ಅಧ್ಯಕ್ಷರಾಗಿ, ಬೆಳ್ಳಾರೆ ಗ್ರಾಮ ಗೌಡ ಸಮಿತಿಯ ಗೌರವ ಅಧ್ಯಕ್ಷರಾಗಿ, ಗೌಡ ಸೋಶಿಯಲ್ ಎಜುಕೇಶನ್ ಟ್ರಸ್ಟ್‌ನ ನಿರ್ದೇಶಕರಾಗಿ, ಸುಳ್ಯ ತಾಲೂಕು ಬ್ಲಾಕ್ ಕಾಂಗ್ರೇಸ್, ಬೆಳ್ಳಾರೆ ವಲಯದ ವಲಯಾಧ್ಯಕ್ಷರಾಗಿ, ಸುಳ್ಯ ತಾಲೂಕು ಕಾಂಗ್ರೇಸ್ ಉಪಾಧ್ಯಕ್ಷರಾಗಿ, ಬೆಳ್ಳಾರೆ ಮತ್ತೆ ತಡಗಜೆ ನೋಡೆಲ್ ಮತ್ತೆ ಮುಂದುವರಿಕಾ ಶಿಕ್ಷಣ

ಸಮಿತಿಯ ಸದಸ್ಯರಾಗಿ, ಅಮರಕ್ರಾಂತಿ ಉತ್ಸವದ ಖಜಾಂಚಿಯಾಗಿ, ಬೆಳ್ಳಾರೆ ವಾಣಿಜ್ಯ ವರ್ತಕ ಸಂಘದ ಅಧ್ಯಕ್ಷರಾಗಿ, ಬೆಳ್ಳಾರೆ ಗ್ರಾಮ ಪಂಚಾಯತ್ ಸದಸ್ಯರಾಗಿ, ಬೆಳ್ಳಾರೆ ಹಿರಿಯ ಪ್ರಾಥಮಿಕ ಶಾಲಾಭಿವೃದ್ಧಿ ಸಮಿತಿಗೆ ಸಂಘ ಸಂಸ್ಥೆಗಳ ಪರವಾಗಿ ಕಮಿಟಿಯ ಸದಸ್ಯರಾಗಿ, ಉತ್ಸಾಹಿ ಯುವಕ ಮಂಡಲದ ಗೌರವಾಧ್ಯಕ್ಷರಾಗಿ, ಯಕ್ಷಕಲಾ ವೇದಿಕೆಯ ಗೌರವ ಸಲಹೆಗಾರರಾಗಿ, ರಾಮಚಂದ್ರಾಪುರ ಮಠ ಗೋ ಹತ್ಯಾ ಚಳವಳಿ ಬೆಳ್ಳಾರೆ ಇದರ ಗ್ರಾಮಾಧ್ಯಕ್ಷರಾಗಿ, ಬಚ್ಚನಾಯಕ ದೇವಸ್ಥಾನ, ಏನೆಕಲ್ಲು, ಇದರ ಜೀರ್ಣೋದ್ಧಾರ ಸಮಿತಿಯ ಖಜಾಂಚಿಯಾಗಿ, ಧರ್ಮಸ್ಥಳ ಜನಜಾಗೃತಿ ವೇದಿಕೆಯ ಸುಳ್ಯ ತಾಲೋಕು ಉಪಾಧ್ಯಕ್ಷ, ಸದಸ್ಯರಾಗಿ, ಕಾಮಧೇನು ಮಲ್ಟಿಪರ್ಪಸ್ ಚಾರಿಟೇಬಲ್ ಟ್ರಸ್ಟ್‌ನ ಅಧ್ಯಕ್ಷರಾಗಿ, ಹದಿನಾಲ್ಕನೇ ಸುಳ್ಯ ತಾಲೋಕು ಕನ್ನಡ ಸಾಹಿತ್ಯ ಸಮ್ಮೇಳನದ ಉಪಾಧ್ಯಕ್ಷರಾಗಿ, ಸುಳ್ಯ ತಾಲೋಕು ದಸರಾ ಸಮಿತಿ ಸದಸ್ಯರಾಗಿ, ಶ್ರೀ ಶಂಕಮಲ ಸುಬ್ರಹ್ಮಣ್ಯ ದೇವಸ್ಥಾನ, ಏನೆಕಲ್ ಇದರ ಜೀರ್ಣೋದ್ಧಾರ ಸಮಿತಿಯ ಖಜಾಂಚಿಯಾಗಿ, ರೋಟರಿ ಕ್ಲಬ್ ಬೆಳ್ಳಾರೆ ಟೌನ್ ಇದರ ಅಧ್ಯಕ್ಷರಾಗಿ, ಗ್ರಾಮ ಪಂಚಾಯತ್ ಅಧ್ಯಕ್ಷರಾಗಿ, ಸುಳ್ಯ ತಾಲೋಕು ಜನಜಾಗೃತಿ ವೇದಿಕೆಯ ಉಪಾಧ್ಯಕ್ಷ ಮತ್ತು ವಲಯಾಧ್ಯಕ್ಷರಾಗಿ, ದ.ಕ ಗೌಡ ವಿದ್ಯಾವರ್ಧಕ ಸಂಘದ ನಿರ್ದೇಶಕರಾಗಿ, ಕೋಟಿ ಚೆನಯ್ಯ ಗರಡಿ, ಬೆಳ್ಳಾರೆ ಜೀರ್ಣೋದ್ಧಾರ ಸಮಿತಿ ಗೌರವಾಧ್ಯಕ್ಷರಾಗಿ, ದ.ಕ. ಜಿಲ್ಲಾ ಭೂತಾರಾಧಕರ ಮತ್ತೆ ನರ್ತಕರ ಸಂಘದ ಅಧ್ಯಕ್ಷರಾಗಿ ಮತ್ತೆ ಸುದ್ದಿ ಸೌಹಾರ್ದ ಸಹಕಾರಿ (ರಿ.) ಪುತ್ತೂರು ನಿರ್ದೇಶಕರಾಗಿ ಸೇವೆ ಸಲ್ಲ್‌ಸ್ತಾವೊಳೊ.

• • • • • • • • • • • • • •

## ಶ್ರೀಮತಿ ತಿರುಮಲೇಶ್ವರಿ, ಜಾಲ್ಸೂರು



ಶ್ರೀಮತಿ ತಿರುಮಲೇಶ್ವರಿಯವು ಜಾಲ್ಸೂರು ಗ್ರಾಮದ ಅರ್ಬಡ್ಕ ಲಕ್ಷ್ಮಣ ಗೌಡರ ಪತ್ನಿ. ಇವು ಜಾಲ್ಸೂರು ಗ್ರಾಮ ಗೌಡ ಮಹಿಳಾ ಸಮಿತಿಯ ಅಧ್ಯಕ್ಷರಾಗಿ, ಸುಳ್ಯ ತಾಲೂಕು ಕೆ.ಡಿ.ಪಿ. ಸದಸ್ಯರಾಗಿ, ಜಿಲ್ಲಾ ಮಹಿಳಾ ಕಾಂಗ್ರೆಸ್‌ನ ಕಾರ್ಯದರ್ಶಿಯಾಗಿ, ಜಾಲ್ಸೂರ್ ಅಡ್ಕಾರು ಸ.ಹಿ.ಪ್ರಾ. ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷೆಯಾಗಿ, ಅಡ್ಕಾರು ಶ್ರೀ ಅಂಜನಾದ್ರಿ ಕ್ಷೇತ್ರದ ಮಹಿಳಾ ಸೇವಾ ಸಮಿತಿ ಅಧ್ಯಕ್ಷೆಯಾಗಿ ಸೇವೆ ಮಾಡ್ತೊಳೊ.

ಪತಿ ಲಕ್ಷ್ಮಣ ಗೌಡರು ಕನಕಮಜಲು ಗ್ರಾ.ಪಂ. ಗ್ರಾಮ ಸಹಾಯಕರಾಗೊಳೊ. ಮಕ್ಕಳಾದ ಕು। ನಿತಿಲ ಜಾಲ್ಸೂರು ಪಯಸ್ವಿನಿ ಪ್ರೌಢಶಾಲೆಯ 9ನೇ ತರಗತಿ ವಿದ್ಯಾರ್ಥಿನಿ.



6

ಮಂಜ ರೇವಂತ್ ಅಡ್ಕಾರು ಹಿ.ಪ್ರಾ.ಶಾಲೆಯಲ್ಲಿ 5ನೇ ತರಗತಿ ವಿದ್ಯಾರ್ಥಿ.

ಇವು ಉಬರಡ್ಕ ಮಿತ್ತೂರು ಗ್ರಾಮದ ಕೆದಂಬಾಡಿ ದಿ। ಕೂಸಪ್ಪ ಮತ್ತೆ ದಿ। ಕುಸುಮಾವತಿಯವರ ಪುತ್ರಿ. ಅರ್ಬಡ್ಕ ಗಿರಯಪ್ಪ ಗೌಡರ ಸೊಸೆ.

• • • • • • • • • • • • • •

## ಶ್ರೀ ಚಿದಾನಂದ ಬೈಲಾಡಿ



ಬೈಲಾಡಿ ಶ್ರೀ ಬಾಬುಗೌಡ ಮತ್ತೆ ಶ್ರೀಮತಿ ಎಂ.ಬಿ. ನೀಲವ್ವ ದಂಪತಿಗಳ ಮಂಜನಾಗಿ ಶ್ರೀ ಚಿದಾನಂದನವು ಹುಟ್ಟಿದೊ. ಶ್ರೀಯುತರ್ ಬಿ.ಎಸ್.ಸಿ., ಎಲ್.ಎಲ್.ಬಿ., ಪದವಿಧರರ್. ಕಳ್ದ ಇಪ್ಪತ್ತಾರ್ ವರ್ಷಗಳ್ಂದ ವಕೀಲರಾಗಿ ಉದ್ಯೋಗ ಮಾಡ್ತ ಒಳೊ.

ಸಮಾಜ ಸೇವೆಲಿ ತೊಡಗಿಸಿಕಂಡ ಇವು ಶ್ರೀ ಮಹಾಲಿಂಗೇಶ್ವರ ದೇವಾಲಯ, ಪುತ್ತೂರು ಇದರ ಟ್ರಸ್ಟಿ ಆಗಿ ಕೆಲ್ಸ ಮಾಡಿಯೊಳೊ. ಶ್ರೀ ದಂಡನಾಯಕ ಉಳ್ಳಾಳ್ತಿ ದೈವಸ್ಥಾನ, ಪುತ್ತೂರು ಇದರ ಟ್ರಸ್ಟಿಯಾಗಿ, ಒಕ್ಕಲಿಗ ಗೌಡ ಸೇವಾ ಸಂಘ, ಪುತ್ತೂರು ಇದರ ಗೌರವ ಅಧ್ಯಕ್ಷರಾಗಿ. ಪುತ್ತೂರ್‌ನ ಒಕ್ಕಲಿಗ ಸಮುದಾಯ ಪತ್ತಿನ ಸಹಕಾರಿ ಸಂಘ (ರಿ.) ಇದರ ಅಧ್ಯಕ್ಷರಾಗಿ ಅಲ್ಲದೆ, ಶ್ರೀ ಮಹಲಿಂಗೇಶ್ವರ I.T.I ಸಂಸ್ಥೆ ಪುತ್ತೂರು, ಇದರ ನಿರ್ದೇಶಕರಾಗಿ ಸೇವೆ ಸಲ್ಲ್‌ಸ್ತಾವೊಳೊ.

ಪುತ್ತೂರ್‌ನ ರೋಟರಿ ಕ್ಲಬ್ ಮತ್ತೆ ಪುತ್ತೂರ್‌ನ ಸಂತ ಫಿಲೋಮಿನ ಕಾಲೇಜ್‌ನ ಅಲ್ಯುಮಿನಿ ಅಸೋಸಿಯೇಶನ್‌ನ ಮಾಜಿ ಅಧ್ಯಕ್ಷರೂ ಹೌದು.

ಪ್ರಿಯದರ್ಶಿನಿ ಆಂಗ್ಲ ಮಾಧ್ಯಮ ಶಾಲೆ, ಬೆಟ್ಟಂಪಾಡಿ, ಪುತ್ತೂರು ಮತ್ತೆ ದ.ಕನ್ನಡ ಜಿಲ್ಲಾ ವಿದ್ಯಾಸಂಘ ಸುಳ್ಯ ಇದರ ನಿರ್ದೇಶಕರಾಗಿಯೂ ಸೇವೆ ಮಾಡ್ತಿರುವ ಶ್ರೀಯುತರ್ ಬೇರೆ ಬೇರೆ ಸಂಘ ಸಂಸ್ಥೆಗಳ್‌ಲಿ ಸೇವೆ ಸಲ್ಲ್‌ಸ್ತೊಳೊ.

**ಇವರ ವಿಳಾಸ :** ಬೈಲಾಡಿ ಮನೆ, ಬಾಲ್ನಾಡು ಗ್ರಾಮ, ಉಜ್ರುಪಾದೆ ಅಂಚೆ, ಪುತ್ತೂರು ತಾಲೂಕು – 574203., ದ. ಕನ್ನಡ ಜಿಲ್ಲೆ.

## ಶ್ರೀ ಯತೀಶ್ ಕುಮಾರ್ ಗೌಡ



ದ.ಕನ್ನಡ ಜಿಲ್ಲೆ ಪುತ್ತೂರು ತಾಲೂಕ್‌ನ ರಾಮಕುಂಜ ಗ್ರಾಮ ಮತ್ತೆ ಅಂಚೆ. ಇಲ್ಲಿನ ಸಂಪ್ಯಾಡಿ ಮನೆ ದಿ. ಮೋನಪ್ಪಗೌಡ ಮತ್ತೆ ದಿ. ಗಿರಿಜ ದಂಪತಿಗಳ ಏಳ್ ಜನ ಮಕ್ಕಳ್ಲಿ ಶ್ರೀ ಯತೀಶ್ ಕುಮಾರ್ ಗೌಡನವು ಕಡೇ ಕುಡಿ. ಐದ್ ಜನ ಹೆಣ್ಣ್ ಮಕ್ಕ, ಇಬ್ಬರ್ ಗಂಡ್‌ಮಕ್ಕ.

ಶ್ರೀ ಯತೀಶ್ ಕುಮಾರ್ ಸಮಾಜ ಶಾಸ್ರಲಿ ಎಂ.ಎ. ಪದವಿಧರ. ಇವರ ಧರ್ಮಪತ್ನಿ ಶ್ರೀಮತಿ ಮಮತ. ಇವು ಎಂ.ಕಾಂ. ಪದವಿಧರೆ. ಇವ್ಕೆ ಇಬ್ಬರ್ ಗಂಡ್‌ಮಕ್ಕ. ಸುಯೋಗ ಮತ್ತೆ ಅದ್ವಿತ್. ಆ ಮಕ್ಕ ಉಡುಪಿಲಿರುವ ಇಂದ್ರಪ್ರಸ್ಥ ಇಸ್ಕೂಲ್‌ಲಿ ಓದ್ತಾ ಒಳೊ.

ಶ್ರೀಯುತರ್ I.C.I.C.I ಬ್ಯಾಂಕ್‌ಲಿ ಬ್ರಾಂಚ್ ಸೇಲ್ಸ್ ಮ್ಯಾನೇಜರ್ ಆಗಿ ಎರಡ್ ವರ್ಷ ಸೇವೆ ಮಾಡಿಯೊಳೊ.

ಇವು ರಾಮಕುಂಜ ಗ್ರಾಮದ ಕಾಂಗ್ರೆಸ್‌ನ ಪ್ರಧಾನ ಕಾರ್ಯದರ್ಶಿಯಾಗಿ, ಸುಳ್ಯ ವಿಧಾನ ಸಭಾ ಕ್ಷೇತ್ರದ ಯುವ ಕಾಂಗ್ರೆಸ್‌ನ ಅಧ್ಯಕ್ಷರಾಗಿ, ರಾಮಕುಂಜ ಗ್ರಾಮ ಪಂಚಾಯ್ತಿನ ಸದಸ್ಯರಾಗಿ ಎರಡ್ ಸತಿ ಆಯ್ಕೆಯಾಗೊಳೊ. ವೆಂಕಟರಮಣ ಕ್ರೆಡಿಟ್ ಕೋ. ಆಪರೇಟಿವ್ ಸೊಸೈಟಿ ಇದರ ಕಡಬ ಶಾಖೆಯ ಸಲಹಾ ಸಮಿತಿ ಸದಸ್ಯರಾಗಿ, ಅಲಂಕಾರು ವಲಯ ಕಾಂಗ್ರೆಸ್‌ನ ಅಧ್ಯಕ್ಷರಾಗಿ ಸೇವೆ ಮಾಡಿಯೊಳೊ.

..............

## ಶ್ರೀ ಪರಶುರಾಮ ಚಿಲ್ತಡ್ಕ



ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕ್ ನಾಲ್ಕೂರು ಗ್ರಾಮದ ಚಿಲ್ತಡ್ಕ ಚಿನ್ನಪ್ಪ ಗೌಡ ಮತ್ತೆ ವಿಶಾಲಾಕ್ಷಿ ದಂಪತಿಗಳ ನಾಲ್ಕನೆ ಪುತ್ರರಾಗಿ ಜನಿಸಿದ ಇವು 10 ನೇ ತರಗತಿ ವಿದ್ಯಾಭ್ಯಾಸನ ಗುತ್ತಿಗಾರ್‌ಲಿ, ಪಿಯುಸಿ ವಿದ್ಯಾಭ್ಯಾಸನ, ಸುಬ್ರಹ್ಮಣ್ಯ ಕಾಲೇಜ್‌ಲಿ, ಪದವಿನ ನೆಹರೂ ಮೆಮೋರಿಯಲ್ ಕಾಲೇಜ್ ಸುಳ್ಯ ಇಲ್ಲಿ ಪೂರೈಸಿದೊ. ಪದವಿ ಮಾಡ್‌ವ ಸಮಯಲಿನೆ ಇವ್ ರಾಜಕೀಯಲಿ ತೊಡಗಿಸಿಕಂಡ್ ತಾಲೂಕು ಎನ್‌ಎಸ್‌ಯುಐ (ವಿದ್ಯಾರ್ಥಿ ಕಾಂಗ್ರೆಸ್) ಇದರ ತಾಲೂಕ್ ಅಧ್ಯಕ್ಷರಾಗಿ ಕಾಲೇಜು ಅವಧಿಲೆ ಗ್ರಾಮ ಪಂಚಾಯತ್ ಸದಸ್ಯರ್ ಆಗಿ ಸೇವೆ ಸಲ್ಲಿಸಿಯೊಳೊ. ಪಂಚಾಯತ್‌ಗೆ ಸತತ ಆಗಿ ನಾಲ್ಕ್ ಬಾರಿ ಆಯ್ಕೆ ಆಗಿ ಉಪಾಧ್ಯಕ್ಷರ್ ಆಗಿ ಎಪಿಎಂಸಿ ಅಧ್ಯಕ್ಷರ್ ಆಗಿ ಸೇವೆ ಸಲ್ಲಿಸಿಯೊಳೊ. ಬ್ಲಾಕ್ ಕಾಂಗ್ರೇಸ್ ಸುಳ್ಯ ಇದರ ಉಪಾಧ್ಯಕ್ಷರಾಗಿ ಹಲವಾರ್ ಸಂಘ ಸಂಸ್ಥೆಗಳ್ಲಿ ತೊಡಗಿಸಿಕಂಡ್ ಸೇವೆನ ಸಲ್ಲಿಸಿಯೊಳೊ.

# ಶ್ರೀ ಕೆ.ಟಿ. ವಿಶ್ವನಾಥ



ಶ್ರೀಯುತರ್ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಯಾಗಿ, ಶ್ರೀ ವೆಂಕಟರಮಣ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ(ರಿ.) ಸುಳ್ಯ. ಇಲ್ಲಿ ಉದ್ಯೋಗ ಮಾಡ್ತಾ ಒಳೊ.

ಮಾಜಿ ಸದಸ್ಯರು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಕರ್ನಾಟಕ ಸರಕಾರ

ಪ್ರಧಾನ ಕಾರ್ಯದರ್ಶಿ :

1. ಹಿರಿಯ ವಿದ್ಯಾರ್ಥಿ ಸಂಘ, ನೆಹರೂ ಸ್ಮಾರಕ ಮಹಾವಿದ್ಯಾಲಯ, ಸುಳ್ಯ.
2. ಸುಳ್ಯ ತಾಲೂಕು ಅಮೆಚೂರ್ ಕಬಡಿ ಅಸೋಸಿಯೇಷನ್ (ಸುಳ್ಯ).

ಕಾರ್ಯದರ್ಶಿ : ಸುಳ್ಯ ತಾಲೂಕು ಗೌಡರ ಯುವಸೇವಾ ಸಂಘ (ರಿ.) ಸುಳ್ಯ

ಸಂಚಾಲಕರು : ಕುರ್‌ಲ್ ತುಳು ಕೂಟ ದುಗ್ಗಲಡ್ಕ ಗೌರವ ಸಲಹೆಗಾರ ಮಿತ್ರ ಯುವಕ ಮಂಡಲ (ರಿ.), ಕ್ಯೊಕುಳಿ.

ಜತೆ ಕಾರ್ಯದರ್ಶಿ : ದ.ಕ. ಜಿಲ್ಲಾ ಅಮೆಚೂರ್ ಕಬಡ್ಡಿ ಅಸೋಸಿಯೇಷನ್(ರಿ.) ಮಂಗಳೂರು.

ಸ್ವಾಗತ ಸಮಿತಿ ಅಧ್ಯಕ್ಷ : ದುಗ್ಗಲಡ್ಕಲಿ ನಡ್ದ 22ನೇ ತಾಲೂಕು ಮಟ್ಟದ ಕನ್ನಡ ಸಾಹಿತ್ಯ ಸಮ್ಮೇಳನ. ಸತತ 3 ವರ್ಷ ದುಗ್ಗಲಡ್ಕಲಿ ಸುಳ್ಯ ತುಳುಮಿಲನದನ ಆಯೋಜನೆ.

ಹವ್ಯಾಸ : ಸಂಘಟನೆ, ಸಾಂಸ್ಕೃತಿಕ, ಕ್ರೀಡೆ, ಸಾಮಾಜಿಕ.

ಕಛೇರಿ ವಿಳಾಸ : ಶ್ರೀ ವೆಂಕಟರಮಣ ಕ್ರೆಡಿಟ್ ಕೋ- ಆಪರೇಟಿವ್ ಸೊಸೈಟಿ (ನಿ) ಸುಳ್ಯ. ಸುಳ್ಯ ತಾಲೂಕು ದ.ಕ.. 08257-232256

ಮನೆ ವಿಳಾಸ : ಕೆ.ಟಿ. ವಿಶ್ವನಾಥ,
ಬಿನ್. ಕೆ. ತಿಮ್ಮಪ್ಪ ಗೌಡ,
ಕ್ಯೊಕುಳಿ ಮನೆ,
ಅಂಚೆ ದುಗ್ಗಲಡ್ಕ, ಸುಳ್ಯ ತಾಲೂಕು. ದ.ಕ. ಜಿಲ್ಲೆ - 574239
ಮೊ : 9448464593, 8197822254, 08257-284593.

# ಶ್ರೀ ಬೇಕಲ್ ದೇವರಾಜ್



ಇವು ಮಡಿಕೇರಿ ತಾಲೋಕು ಕರಿಕೆ ಗ್ರಾಮದ ಬೇಕಲ್ ಮನೆಯದಿ। ದಾಮೋದರ ಮತ್ತೆ ಶ್ರೀಮತಿ ಜಾನಕಿ ದಂಪತಿಗಳ ಪುತ್ರರಾಗಿ 1973ರಲ್ಲಿ ಹುಟ್ಟಿದೊ.

ಪ್ರಾಥಮಿಕ ಶಿಕ್ಷಣನ ಕರಿಕೆ ಪ್ರಾಥಮಿಕ ಶಾಲೆಲಿ ಮತ್ತೆ ಪ್ರೌಢ ಶಿಕ್ಷಣನ ನೆಹರು ಮೆಮೋರಿಯಲ್ ಸ್ಕೂಲ್ ಅರಂತೋಡ್‌ಲಿ ಪೂರೈಸಿದೊ. ಪಿ.ಯು.ಸಿ. ವಿದ್ಯೆನ ಸುಳ್ಯದ NMC ಲಿ ಮತ್ತೆ ಪದವಿನ ಮಡಿಕೇರಿ ಕಾಲೇಜ್‌ನ ಪೂರೈಸಿದೊ.

ಸಹಕಾರಿ ಕ್ಷೇತ್ರಲಿ ತೊಡಗಿಸಿಕಂಡ್ ಸಮಾಜ ಸೇವೆಯಲಿ ತೊಡಗಿಸಿಕಂಡೊಳೊ. ಕರಿಕೆಯ ಗೌಡ ಸಮಾಜದ ಅಧ್ಯಕ್ಷರಾಗಿ ಈ ಹಿಂದೆ ಸೇವೆ ಮಾಡ್ಯೊಳೊ. ಈಗ ಉಪಾಧ್ಯಕ್ಷರಾಗಿ ಸೇವೆ ಮಾಡ್ತಾ ಒಳೊ. ಕರಿಕೆಯ ವ್ಯವಸಾಯ ಸೇವಾ ಸಹಕಾರಿ ಸಂಘಲಿ ಈ ಹಿಂದೆ ಅಧ್ಯಕ್ಷರಾಗಿದ್ದೊ. ಹಾಲಿ ಡೈರೆಕ್ಟರಾಗಿ ಮುಂದುವರೆಯುತ್ತೊಳೊ. ಸುಮಾರ್ 10 ವರ್ಷಗಳ ಕಾಲ ಸಹಕಾರಿ ಸಂಘಲಿ ತೊಡಗಿಸಿಕಂಡೊಳೊ.

ಭಾಗಮಂಡಲದ ಶ್ರೀ ಭಗಂಡೇಶ್ವರ ರೈತ ಉತ್ಪಾದಕರ ಸಂಸ್ಥೆಯಲ್ಲಿ ಹಾಲಿ ಡೈರೆಕ್ಟರಾಗೊಳೊ.

ಶಾಲೆನ S.D.M.C. ಅಧ್ಯಕ್ಷರಾಗಿ ಈ ಹಿಂದೆ ಸೇವೆ ಸಲ್ಲಿಸಿದ ಇವು ಹೈಸ್ಕೂಲ್‌ನ ಆಡಳಿತ ಮಂಡಲಿ ಹಾಲಿ ಸದಸ್ಯರಾಗಿ (ದಾನಿಗಳ) ಕ್ಷೇತ್ರದಲ್ಲಿ ಮುಂದುವರಿತ್ತೊಳೊ.

ಶ್ರೀಯುತರ್ ವೃತ್ತಿಲಿ ಕೃಷಿಕರಾಗಿ ಸಾವಯವ ಕೃಷಿಲಿ ತೊಡಗಿಸಿಕಂಡೊಳೊ. ಇವರ ಪತ್ನಿ ಶ್ರೀಮತಿ ರೇಷ್ಮಾ. ಈ ದಂಪತಿಗೆ ಇಬ್ಬರ್‌ಮಕ್ಕ. ಚಂದನ್ ರಾಜ್ ಮತ್ತೆ ವರುಣ್ ರಾಜ್.

ಇವು ಕ್ರೀಡಾ ಕ್ಷೇತ್ರಲಿ ಆಸಕ್ತಿಯನ್ನ ಹೊಂದ್ಯೊಳೊ. ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕಂಡ್ 8 ವರ್ಷ ವಲಯ ಅಧ್ಯಕ್ಷರಾಗಿ ಸೇವೆ ಸಲ್ಲಿಸ್ಯೊಳೊ.

# ಶ್ರೀ ಬಾರಿಯಂಡ ಜೋಯಪ್ಪ



ವಿರಾಜಪೇಟೆ ತಾಲೂಕ್‌ನ ಸುಳುಗೋಡು ಗ್ರಾಮದ ಕಾಟಿಬೆಟ್ಟತ್ತೇಳುವಲ್ಲಿ ಬಾರಿಯಂಡ ದಿ.ರಾಮಪ್ಪ ಮತ್ತೆ ದಿ. ಅಚ್ಚವ್ವನವರ ಮಂಜನಾಗಿ 02-08-1957 ರ್‌ಲಿ ಹುಟ್ಟಿದೊ. ಜೋಯಪ್ಪನವುಕೆ ಒಬ್ಬ ಅಕ್ಕ ಒಳೊ. ಅವು ಹೈಸ್ಕೂಲ್ ಮುಖ್ಯ ಶಿಕ್ಷಕಿಯಾಗಿ ಈಗ ನಿವೃತ್ತರಾಗೊಳೊ. ಜೋಯಪ್ಪನವು ಹುಟ್ಟಿ ಬೆಳ್ದ ಕಾಟಿಬೆಟ್ಟ ಈಗ ಗೊಂಡಾರಣ್ಯ ಆಗಿ ನಾಗರಹೊಳೆ ಅಭಯಾರಣ್ಯಕೆ ಸೇರಿಟು.

ಜೋಯಪ್ಪನವು ಎಂ.ಎ., ಬಿ.ಎಡ್., ಪದವೀಧರರ್. ಮಡಿಕೇರಿ ತಾಲೂಕ್‌ನ ಮದೆನಾಡ್ ಗ್ರಾಮದ ಮದೆ ಮಹೇಶ್ವರ ಪ.ಪೂ. ಕಾಲೇಜ್‌ಲಿ ಸಹಾಯಕ ಶಿಕ್ಷಕರಾಗಿ, ಉಪನ್ಯಾಸಕರಾಗಿ, ಮುಖ್ಯೋಪಾಧ್ಯಾಯರಾಗಿ, ಪ್ರಾಂಶುಪಾಲರಾಗಿ ಈಗ ನಿವೃತ್ತರಾಗೊಳೊ.

ಸಾಹಿತ್ಯಪರ ಚಟುವಟಿಕೆಲಿ ತೊಡಗಿಸಿಕಂಡ ಇವು ಮಡಿಕೇರಿ ತಾಲೂಕು 6ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಆಯ್ಕೆಯಾದೊ. ಕೊಡಗು ಜಿಲ್ಲಾ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಸಂಘದ ಅಧ್ಯಕ್ಷರಾಗಿ, ಕರ್ನಾಟಕ ರಾಜ್ಯ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಸಂಘದ ಖಜಾಂಚಿಯಾಗಿ ಕಾರ್ಯನಿರ್ವಹಿಸಿಯೊಳೊ.

ಕೊಡಗು ಜಿಲ್ಲಾ ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ರಾಜ್ಯ ಉತ್ತಮ ಶಿಕ್ಷಕ ಪ್ರಶಸ್ತಿ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಗೆ ಭಾಜನರಾಗೊಳೊ.

ಜೋಯಪ್ಪನವರ ಪತ್ನಿ ಶ್ರೀಮತಿ ಕೆ.ಎಸ್.ಭಾರತಿ. ಈ ದಂಪತಿಗೆ ಇಬ್ಬರ್ ಮಕ್ಕ. ಮಗಳು ಶ್ರೀಮತಿ ದಿವ್ಯ, ಎಂ.ಎಸ್.ಡಬ್ಲು ಪದವಿಧರೆ. ಮಂಜ ಕುಮಾರ ದೀಪಕ್ ಎಂ.ಎಸ್. ಕಮ್ಯುನಿಕೇಶನ್‌ಲಿ ಸ್ನಾತಕೋತ್ತರ ಪದವಿಧರ. ಈಗ ಡಿಜಿಟಲ್ ಟೆಕ್ನಾಲಜಿ ಮೇಲೆ Ph.D ಮಾಡ್ತಾ ಒಳೊ.

ಜೋಯಪ್ಪನವು 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು'ತೇಳುವ ಬೇಟೆ ಸಾಹಿತ್ಯ ಕೃತಿ, ಅರೆಭಾಷೆ ಸಾಹಿತ್ಯಲಿ ಸುರೂನ ಸಣ್ಣ ಕತೆಗಳ ಸಂಕಲನ 'ಚಾಂಪಾ', 'ತೋರಣ'ತ್ತೇಳುವ ಅರೆಭಾಷೆ ಕವನ ಸಂಕಲನ, 'ಬೆಳ್ಳಿಮುಷ್ಟಿ'-ಅನುವಾದಿತ

ಕೃತಿಗಳ ರಚನೆ ಮಾಡ್ದ ಇವು 'ಸಾಧಕರ ಹೆಜ್ಜೆಗಳು'ತ್ತೇಳುವ ಐದನೇ ಪುಸ್ತಕ ಈಗ ಮುದ್ರಣ ಆಗ್ತಾ ಉಟ್ಟು, ಇಲ್ಲಿ ಕಲ್ಲ್ ಪಿಸಿಗುಟ್ಟಿದೆ-ಗುಡ್ಡೆಮನೆ ಅಪ್ಪಯ್ಯಗೌಡರ ಕುರಿತ ರೂಪಕ, 'ಬದ್ಕೊಳಗೆ ಬದ್ಕ್' ನಾಟಕ ಮಡಿಕೇರಿ ಆಕಾಶವಾಣಿಲಿ ಪ್ರಸಾರ ಆಗಿಟ್ಟು, ಮಾತೊಳಗೆ ಮಾತ್ ಅಲ್ಲದೆ ಹಲವಷ್ಟು ಚಿಂತನೆಗ ಪ್ರಸಾರ ಆಗೊಳೊ. ಅರೆಭಾಷೆ ಭಕ್ತಿ ಗೀತೆಗ ಆಗಿಂದಾಗೆ ಪ್ರಸಾರ ಆಗ್ತಾವುಟ್ಟು.

• • • • • • • • • • • • • •

## ಶ್ರೀಮತಿ ಕಡ್ಲೇರ ತುಳಸಿ ಮೋಹನ್



ಶ್ರೀಮತಿ ಕಡ್ಲೇರ ತುಳಸಿ ಮೋಹನ್ ಇವು ಪಾರಾಣೆ-ಬಾವಲಿ ಗ್ರಾಮದ ಪೊನ್ನಚನ ತಿಮ್ಮಯ್ಯ ಲೀಲಾವತಿ ದಂಪತಿಗಳ ಎರಡನೇ ಮಗ್ಳ್. ಪಿ.ಯು.ಸಿ. ವ್ಯಾಸಂಗ ಮಾಡಿರುವ ತುಳಸಿ ಮೋಹನ್ ಸ್ಟೆನೋ-ಕಂಪ್ಯೂಟರ್ ತರಬೇತಿ ಪಡ್ಕಂಡ್ ನಾಪೋಕ್ಲು ಶ್ರೀ ರಾಮಾಟ್ರಸ್ಟ್ ಆಂಗ್ಲ ಮಾಧ್ಯಮ ಶಾಲೆಲಿ ಶಿಕ್ಷಕಿಯಾಗಿ ಸೇವೆ ಸಲ್ಲಿಸಿಯೊಳೊ.

ಪ್ರಸ್ತುತ ಕಡ್ಲೇರ ದಿ. ಅಯ್ಯಪ್ಪ ತಂಗಮ್ಮ ದಂಪತಿಗಳ ಮಂಜ ಕಡ್ಲೇರ ಮೋಹನ್ (ಬಿಜು) ಅವರ ಪತ್ನಿಯಾಗಿರುವ ತುಳಸಿ ಮೋಹನ್ ಕೃಷಿ, ಹೈನುಗಾರಿಕೆನ ಅವಲಂಬಿಸಿದ್ ಮಡಿಕೇರಿ ಆಕಾಶವಾಣಿಲಿ ಅರೆಬಾಸೆ ಸುದ್ದಿ ವಾಚಕಿಯಾಗಿ, ಕಲಾವಿದೆಯಾಗಿ ಗುರ್ತಿಸಿಕಂಡೊಳೊ. ಸಂಘಟನಾ ಚಟುವಟಿಕೆಲಿ ತೊಡಗ್‌ಸಿಕಂಡಿರುವ ಇವು ಸ್ವಂತ ಕವನ ರಚನೆ ಮಾಡ್ತು, ಪದ್ಯ ರಚನೆ ಹಾಡ್‌ಗಾರಿಕೆಲಿ ಆಸಕಿ ಹೊಂದ್ಯೊಳೊ. ಹಂಗೇ ತಾಲೂಕು, ಜಿಲ್ಲೆ, ರಾಜ್ಯಮಟ್ಟದ ಕವಿಗೋಷ್ಠಿಗಲ್ಲಿ ಭಾಗವಹಿಸಿ ಅರೆಬಾಸೆಲಿ ಕವನ ಓದಿ ಗೌಡ ಜನಾಂಗನ ಪ್ರತಿನಿಧಿಸ್ಯೊಳೊ.

# ಶ್ರೀಮತಿ ಶ್ವೇತ ಮಡಪ್ಪಾಡಿ



ಶ್ರೀ ಎಂ. ಬಾಲಕೃಷ್ಣ ಮತ್ತೆ ಶ್ರೀಮತಿ ದಮಯಂತಿ ದಂಪತಿಗಳ ಮಗಳಾಗಿ 15–08–1986ರ್‌ಲಿ ಹುಟ್ಟಿದ ಶ್ರೀಮತಿ ಶ್ವೇತನವು ಕುಂದಾಪುರ, ಸುಳ್ಯ, ಮಂಗಳೂರು ಇಲ್ಲೆಲ್ಲಾ ಕ್ರಮವಾಗಿ ಎಸ್.ಎಸ್.ಎಲ್.ಸಿ., ಪಿ.ಯು.ಸಿ. ಮತ್ತೆ ಬಿ.ಎ. ಪದವಿನ ಪಡ್ಕಂಡೊ.

ಮೈಸೂರು ವಿ.ವಿ. ನಿಲಯಲಿ ಜಾನಪದ ಎಂ.ಎ; ಪದವಿನ ಮೂರು ಚಿನ್ನದ ಪದಕಗಳೊಟ್ಟಿಗೆ (82%) ಪಡ್ಕಂಡ ಪ್ರತಿಭಾವಂತೆ. ಪಿ.ಜಿ. ಡಿಪ್ಲೊಮ (ಲಿಂಗ್ವಿಸ್ಟಿಕ್) 62.6% ಪಡ್ದ್ ಪಾಸಾಗೊಳೊ. ಅಷ್ಟೇ ಅಲ್ಲದೆ ಬೆಂಗಳೂರು ವಿ.ವಿ. ನಿಲಯದ ನ್ಯಾಷನಲ್ ಕಾಲೇಜ್, ಬಸವನಗುಡಿಲಿ ಕನ್ನಡ ಸಾಹಿತ್ಯದ ಎಂ.ಎ. ಪದವಿನ ಒಂದನೇ ರ್‍ಯಾಂಕ್‌ನೊಟ್ಟಿಗೆ (86%) ತೇರ್ಗಡೆ ಆಗೊಳೊ.

2011ರ್ NET (Kannada) 2011 ರ್‌ಲಿ SLET (Kannada) 2014ರ್‌ಲಿ NET (Folklore) ಪಾಸಾಗೊಳೊ. ಕರ್ನಾಟಕ ಜಾನಪದ ಅಕಾಡೆಮಿಂದ ಫೆಲೋಶಿಪ್ ಪಡ್ಕೊಂಡೊಳೊ.

"Folk Reactions for the Colonialism" ಈ ಕುರ್ತ್ Ph.D ಅಂತಿಮ ಹಂತಲುಟ್ಟು.

**ಪಠ್ಯೇತರ ಚಟುವಟಿಕೆ :**

ಯುವಜನ ಮೇಳಗಲ್ಲಿ ಭಾಗವಹಿಸಿದ ಶ್ವೇತನವು ತಾಲೂಕು ಮತ್ತೆ ಜಿಲ್ಲಾ ಮಟ್ಟದ ಸ್ಪರ್ಧೆಗಲ್ಲಿ ಸಾಕಷ್ಟ್ ಸತಿ ಬಹುಮಾನ ಪಡ್ದೊಳೊ. ಮೈಸೂರು ಆಕಾಶವಾಣಿಲಿ ಕನ್ನಡ ಸಾಹಿತ್ಯ ಕುರ್ತ್ ಕಾರ್ಯಕ್ರಮ ಕೊಟ್ಟೊಳೊ. ಯುವವಾಣಿಲಿ ಸನ ಕಾರ್ಯಕ್ರಮ ಕೊಟ್ಟ ಶ್ವೇತನವು ಏಕಪಾತ್ರಾಭಿನಯ, ರಾಷ್ಟ್ರಮಟ್ಟದ ಪ್ರಬಂಧ ಸ್ಪರ್ಧೆಲಿ ಒಂದನೇ ಇನಾಮುನ ತಕಂಡೊಳೊ. ಮಡಪ್ಪಾಡಿ ಸಾಂಸ್ಕೃತಿಕ ಮತ್ತೆ ವಿದ್ಯಾಭ್ಯಾಸ ಟ್ರಸ್ಟ್‌ನ ಸ್ಥಾಪಕ ಕಾರ್ಯದರ್ಶಿಯಾಗೊಳೊ. ಜಿಲ್ಲೆ, ರಾಜ್ಯ ಮತ್ತೆ ರಾಷ್ಟ್ರಮಟ್ಟಲಿ ತಮ್ಮ ಬಹುಮುಖ ಪ್ರತಿಭೆನ ಅನಾವರಣಗೊಳಿಸಿಯೊಳೊ.

ಇವು ಈಗ ಮೈಸೂರು ಜಾನಪದ ವಿಶ್ವವಿದ್ಯಾಲಯಲಿ ಸಹಾಯಕ ಉಪನ್ಯಾಸಕಿಯಾಗಿ ಕರ್ತವ್ಯ ನಿರ್ವಹಿಸ್ತಾ ಒಳೊ.

## ಶ್ರೀ ಎ.ಕೆ ಹಿಮಕರ



ಆನೋರ್ಜಿ ಕೃಷ್ಣಪ್ಪ ಹಿಮಕರ ಇವು ಶ್ರೀಮತಿ ಅಕ್ಕಯ್ಯ ಮತ್ತೆ ದಿ|ಕೃಷ್ಣಪ್ಪ ಗೌಡರ ಮ|ಂಜ. ಇವು ಮೋಂಟಡ್ಕ ಕೋಡ್ತುಗುಳಿತ್ತೇಳುವ ಕೂಡು ಕುಟುಂಬಕ್ಕೆ ಸೇರ್ದವು. ಕಳ್ದ ಐವತ್ತು ವರ್ಷಂದ ಇವು ಸುಳ್ಯ ತಾಲೂಕ್‌ನ ಗುತ್ತಿಗಾರ್ ಗ್ರಾಮಲಿ ಮನೆ ಮಾಡಿಕಂಡ್ ಒಳೊ.

ಪೈಲಾರ್, ಕುಕ್ಕುಜಡ್ಕ, ಸುಳ್ಯದ ಬೋರ್ಡ್ ಹೈಸ್ಕೂಲ್ ಓದಿ ಸುಬ್ರಹ್ಮಣ್ಯಲಿ ಪಿ.ಯು.ಸಿ ಮಾಡಿ ಎನ್ನೆಂಸಿಗೆ ಬೋಣಿ ಮಾಡ್ದ ಸುರೂನ ವಿದ್ಯಾರ್ಥಿಯಾಗಿ ಡಿಗ್ರಿ ಮಾಡ್ಯೊಳ. ಹೈಸ್ಕೂಲಿಲಿ ಮಾಷ್ಟ್ರಾಗಿ ಮತ್ತೆ ಮಂಗಳೂರು ಯುನಿವರ್ಸಿಟಿಲಿ ಎಂ.ಎ ಮಾಡಿ ಡಿಲ್ಲಿಗೆ ಹೋದೊ. ಅಲ್ಲಿನ ಜೆ.ಎನ್.ಯೂ.ಲಿ ಯಂ.ಫಿಲ್, ಮತ್ತೆ ಪಿ.ಎಚ್‌ಡಿ ಮಾಡ್ದೊ. ICAR ಫೆಲೋ ಆಗಿದ್ದೊ. ICAR ಕೃಷಿ ತಂತ್ರಜ್ಞಾನ ವಿಚಾರಲಿ ಸಂಶೋಧಕರಾಗಿದ್ದೊ. ಕರ್ನಾಟಕದ ದಿ ಕನ್ಸರ್ನ್ಡ್ ಫಾರ್ ವರ್ಕಿಂಗ್ ಚಿಲ್ಡ್ರನ್ ಸಂಸ್ಥೆಲಿ ರಾಜ್ಯದ 20 ಗ್ರಾಮಗಳ ಮತ್ತೆ ಬೆಂಗಳೂರ್‌ನ 8 ಸ್ಲಮ್ಮುಗಳ ಅಧ್ಯಯನ ನಡ್ಸಿದೊ. ಪರಸ್ಪರ , ಸ್ಪರ್ಶ, ಡೀಡ್ಸ್, ಸೆಸ್ಕಾ, ಕಿರಣಕೇಂದ್ರ, ಹೀಗೆ ಹತ್ತಾರ್ ಸಮಾಜಸೇವಾ ಸಂಸ್ಥೆಗಳ್ಲಿ ಕೆಲಸ ಮಾಡ್ಯೊಳ

'ಸಮುದಾಯ' ನಾಟಕ ತಂಡ ' ಅಭಿನಯ ಸುಳ್ಯ' ಸ್ವಂತಿಕಾ ಪ್ರಕಾಶನ, ಅಭಿವ್ಯಕ್ತ ಆಯನ, ಬಾರ್ನಫ್ರೀ ಸಂಸ್ಥೆ ಹೀಂಗೆ ಹಲವಾರ್ ಸಾಂಸ್ಕೃತಿಕ ತಂಡಗಳ್ಲಿ ಕೆಲ್ಸ ಮಾಡ್ಯೊಳ.

### ಇವು ಬರ್ದ ಪುಸ್ತಕಗಳ ವಿವರ

'ಜನಮನದ ಕಂದ್ರಪ್ಪಾಡಿ'(2001) ಚೇರ್ಕಾಡಿ ಬದುಕು ಮತ್ತು ವಿಚಾರ(2002) ಸಾವಯವ (ಕೃಷಿ ಬಗ್ಗೆ); 'ಎಸೆದು ನೋಡು ಸುಟ್ಟುನೋಡು' ಪ್ಲಾಸ್ಟಿಕ್ ತ್ಯಾಜ್ಯ ಬಗ್ಗೆ ನಾಟಕ(2003), ಮನೆಗೆ ಬಂದ ನೀಲಿ ಕುದುರೆ, ನಾಟಕ ಏಡ್ಸ್ ಬಗ್ಗೆ (2003), 'ಏಳಿ ಎದ್ದೇಳೀ ನಿಮ್ಮ ಹಕ್ಕುಗಳಿಗಾಗಿ ಏಳಿ' (2004) ಲಂಡನ್‌ಂದ ಪ್ರಕಟ ಆಗುಟು. 'ಕರ್ನಾಟಕದ ಆಯ್ದ ಗ್ರಾಮಾಧ್ಯಯನ' ಕರ್ನಾಟಕ ಸರಕಾರಂದ ಪ್ರಕಟಣೆ(2004) ನೇತಾಜಿ ಸುಭಾಶ್ಚಂದ್ರ ಬೋಸ್. – ಫಾರ್ವರ್ಡ್ ಬ್ಲಾಕ್ ಪಕ್ಷಂದ ಪ್ರಕಟಿತ, 'ಮಹಿಳೆಯರಿಗಾಗಿ ಕಾನೂನು ಕೈಪಿಡಿ.' ಮಹಿಳಾ ಆಯೋಗದ ಪ್ರಕಟಣೆ (2008).

### ಆಂದೋಲನ

'ಸಮುದಾಯ' ರಂಗಭೂಮಿ ಚಳುವಳಿ 1980 ರ್‌ಂದ, ಪಶ್ಚಿಮ ಘಟ್ಟ ಉಳಿಸಿ ಆಂದೋಲನ 1987 ರಿಂದ, ಸಂಪೂರ್ಣ ಸಾಕ್ಷರತಾ ಆಂದೋಲನ,

ದೆಹಲಿ, ಉತ್ತರ ಪ್ರದೇಶ ಮತ್ತೆ ಗುಜರಾತ್ ರಾಜ್ಯದಲ್ಲಿ 'ದಲಿತ ಶಿಕ್ಷಾ ಆಂದೋಲನ'ದ ಸಂಚಾಲಕರಾಗಿ, ಮಂಡಲ್ ಕಮಿಶನ್ ಪರ ಆಂದೋಲನದ ಸಂಚಾಲಕರಾಗಿ ಶಿಕ್ಷಣ , ಪರಿಸರ, ಮೀಸಲಾತಿ, ಸಾಮಾಜಿಕ ನ್ಯಾಯ, ಜಾತ್ಯತೀತತೆ, ಸಮಾನತೆ, ರೈತ ಮತ್ತೆ ದಲಿತ ಚಳುವಳಿಲಿ ಸಕ್ರೀಯವಾಗಿ ಕೆಲ್ಸ ಮಾಡ್ತಾ ಒಳೊ. ಸುಳ್ಯ ತಾಲೂಕಿನ ಕನ್ನಡ ಸಾಹಿತ್ಯ ಪರಿಷತ್‌ನ ಅಧ್ಯಕ್ಷರಾಗಿ, ನವಸಾಕ್ಷರರ ರಾಜ್ಯಮಟ್ಟದ ಸಾಹಿತ್ಯ ಸಮ್ಮೇಳನ ಹೊಸ ಜನಾಂಗದ ಸಾಹಿತ್ಯ ಸಮ್ಮೇಳನ ಮಾಡಿ ಪ್ರಖ್ಯಾತಿ ಪಡ್ದೊಳೊ

ಗುತ್ತಿಗಾರ್‌ಲಿ ಬಂಟಮಲೆ ಅಕಾಡೆಮಿ ಸ್ಥಾಪನೆ ಮಾಡಿ 'ಕಾಡ್‌ನ ಸಾಲೆಂತ ಸಾಹಿತ್ಯದ, ಸಂಸ್ಕೃತಿ ಅಧ್ಯಯನ ಕೇಂದ್ರ ನಡ್ಸ್‌ತಾ ಒಳೊ. ಅರೆಬಾಸೆಲಿ ಬರ್ದ 5 ಪುಸ್ತಕನ ಇವು ಅವರ ಬಂಟಮಲೆ ಪ್ರಕಾಶನಲಿ ಪ್ರಕಟಣೆ ಮಾಡ್ಯೊಳೊ.

• • • • • • • • • • • • • •

## ಸಹ ಸದಸ್ಯರ್:
## ಶ್ರೀ ಕಾನೆಹಿತ್ಲು ಮೊಣ್ಣಪ್ಪ

ಕೊಡ್‌ಗ್ ಜಿಲ್ಲೆಯ ಭಾಗಮಂಡಲ ನಾಡ್‌ನ ಕಾನೆಹಿತ್ಲು ದಿ। ಅಪ್ಪಚ್ಚ ಮತ್ತೆ ಚೆಂಬವ್ವ ದಂಪತಿಗಳ ಪುತ್ರನಾಗಿ 1959 ಮೇ 17 ರಂದ್ ಜನಿಸಿದೊ. ಪ್ರಸ್ತುತ ಕಾನ್ವೆಂಟ್ ಜಂಕ್ಷನ್, ಮಡಿಕೇರಿ ಇಲ್ಲಿ ವಾಸ ಇರ್ವ ಶ್ರೀಯುತರ್ ಪಿ.ಯು.ಸಿ ಮತ್ತೆ ಐ.ಟಿ.ಐ ಡಿಪ್ಲೊಮಾ ಪದವಿನ ಪಡ್ದ್ ಬೆಂಗಳೂರ್‌ನ ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ ಕಂಪೆನಿಲಿ ಉದ್ಯೋಗಲಿದ್ದೊ. ನಂತರಲಿ ಕೊಡ್‌ಗಿಗೆ ಬಂದ್ ಸ್ವಂತ ವ್ಯವಹಾರ ಮಾಡಿಕಂಡ್ ರಾಜಕಿಯಲಿ ಗುರ್ತಿಸಿಕೊಂಡೊಳೊ.



ಈಗ ಮಡಿಕೇರಿಲಿ ಕೂರ್ಗ್ ಫೈನಾನ್ಸ್, ರಿಯಲ್ ಎಸ್ಟೇಟ್ ಹಂಗೆ ಸ್ಪೈಸಸ್‌ನೂ ನಡ್ಸ್‌ತಾವೊಳೊ.

ಮಡಿಕೇರಿ ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷರಾಗಿ, ಮಡಿಕೇರಿ ಬ್ಲಾಕ್ ಸೇವಾದಳದ ಅಧ್ಯಕ್ಷರಾಗಿ, ಕೊಡ್‌ಗ್ ಜಿಲ್ಲಾ ರಿಯಲ್ ಎಸ್ಟೇಟ್ ಬಿಸಿನೆಸ್‌ಮೆನ್ ಎಶೋಶಿಯೇಶನ್‌ನ ಪ್ರಧಾನ ಕಾರ್ಯದರ್ಶಿಯಾಗಿ, ಮಡಿಕೇರಿ ತಾಲೂಕ್ ಕನ್ನಡ ಸಾಹಿತ್ಯ ಪರಿಷತ್‌ನ ನಿರ್ದೇಶಕರಾಗಿ ಸೇವೆ ಸಲ್ಲಿಸಿಯೊಳೊ. ಮಡಿಕೇರಿ ದಸರ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಮತ್ತೆ ಶ್ರೀ ಚಾಮುಂಡೇಶ್ವರಿ ದೇವಿ ಸೇವಾ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿಯೂ ಸಹ ಕಾರ್ಯನಿರ್ವಹಿಸಿಯೊಳೊ.

# ಶ್ರೀ ಕುಂಬಗೌಡ್ನ ಟಿ. ಪ್ರಸನ್ನ



ಶ್ರೀ ಪ್ರಸನ್ನನವು ಶ್ರೀ ಕೆ.ಎ. ತಿಮ್ಮಯ್ಯನವರ ಮಂಙ, ಕಾಫಿಕಳ ಎಸ್ಟೇಟ್, ಮಕ್ಕಂದೂರು ಗ್ರಾಮ ಮತ್ತು ಅಂಚೆ ಇಲ್ಲಿ ವಾಸ ಮಾಡ್ತಾ ಒಳೊ. ಇವು 15-05-1970 ರಂದ್ ಹುಟ್ಟಿದೊ.

ಶ್ರೀ ಪ್ರಸನ್ನನವು ವಿದ್ಯಾವರ್ಧಕ ಕಾಲೇಜು, ಮೈಸೂರು ಇಲ್ಲಿ ವ್ಯಾಸಂಗ ಮಾಡಿ ಬಿ.ಕಾಂ. ಪದವೀಧರ ಆಗೊಳೊ. ಇವು ಮಕ್ಕಂದೂರು ಗ್ರಾಮದ ಗೌಡ ಸಮಾಜದ ಹಾಲಿ ನಿರ್ದೇಶಕರಾಗೊಳೊ. ಶ್ರೀ ಭದ್ರಕಾಳಿ ಯುವಕ ಸಂಘದ ಕಾರ್ಯದರ್ಶಿಯಾಗೊಳೊ.

ಮಕ್ಕಂದೂರು ಪ್ರಾ.ಕೃ.ಪ.ಸ. ಸಂಘದ ಮಾಜೀ ಅಧ್ಯಕ್ಷರ್‌ರಾಗಿದ್ದ್, ಹಾಲಿ ನಿರ್ದೇಶಕರಾಗಿ ಸೇವೆ ಸಲ್ಲ್‌ಸ್ತಾ ಒಳೊ. ಮಕ್ಕಂದೂರು ಸಹಕಾರ ದವಸ ಭಂಡಾರದ ಹಾಲಿ ಅಧ್ಯಕ್ಷರಾಗೊಳೊ. ರಾಜೀವ್ ಗಾಂಧಿ ಪಂಚಾಯತ್‌ರಾಜ್ ಸಂಘಟನೆಯ ಮಡಿಕೇರಿ ತಾಲ್ಲೂಕಿನ ಸಂಯೋಜಕರಾಗೊಳೊ.

• • • • • • • • • • • • • •

# ಶ್ರೀ ಸುರೇಶ್ ಯಂ. ಯಚ್.



ಶ್ರೀ ಸುರೇಶ್ ಯಂ. ಯಚ್. ಅಮ್ಮೆ ಮಡಪ್ಪಾಡಿ, ಸುಳ್ಯ ತಾಲೂಕ್ ಉಬರಡ್ಕ ಮಿತ್ತೂರು ಗ್ರಾಮದ ಮಡಪ್ಪಾಡಿ ದಿ. ಯಂ. ಹುಕ್ರಪ್ಪ ಮಾಸ್ತರ್ ಮತ್ತೆ ದಿ. ಗಿರಿಜಾ ದಂಪತಿಗಳ ಮಂಙ. ಪ್ರಾಥಮಿಕ ಶಿಕ್ಷಣನ ಐವರ್ನಾಡು ಗ್ರಾಮದ ದೇವರಕಾನ ಇಸ್ಕೂಲ್‌ಲಿ, ಪ್ರೌಢ ಮತ್ತೆ ಪಿ.ಯು.ಸಿ. ಶಿಕ್ಷಣನ ಬೆಳ್ಳಾರೆ ಜೂನಿಯರ್ ಕಾಲೇಜ್‌ಲಿ ಮುಗ್ಸಿದ ಸುರೇಶನವು ತಾಂತ್ರಿಕ ಶಿಕ್ಷಣನ ಕೆ.ಪಿ.ಟಿ. ಮಂಗಳೂರ್‌ಲಿ ಮಾಡ್ದೊ.

ಇವು ರಾಜಕೀಯ ಮತ್ತೆ ಧಾರ್ಮಿಕ ಕ್ಷೇತ್ರಲಿ ಗುರ್ತಿಸಿಕಂಡೊಳೊ. ಎರಡ್ ಅವಧಿಗೆ ಉಬರಡ್ಕ ಗ್ರಾಮ ಪಂಚಾಯ್ತಿನ ಅಧ್ಯಕ್ಷರಾಗಿ, ಸದಸ್ಯರಾಗಿ ಸೇವೆ ಮಾಡ್ಯೊಳೊ. ಈಗ ಶ್ರೀ ನರಸಿಂಹ ಶಾಸ್ತಾವು ದೇವಸ್ಥಾನ ಉಬರಡ್ಕ ಮಿತ್ತೂರ್ ಇದರ ಜೀರ್ಣೋದ್ಧಾರ ಸಮಿತಿ ಅಧ್ಯಕ್ಷರಾಗಿ, ಶ್ರೀ ವಿಷ್ಣುಮೂರ್ತಿ ಒತ್ತೆಕೋಲ ಸಮಿತಿ ಅಮ್ಮೆ ಕೊಡಿಯಾಲ್ ಬೈಲು ಇದರ ಕಾರ್ಯದರ್ಶಿಯಾಗಿ, ಶ್ರೀ ವಿಷ್ಣು ಯುವಕ ಮಂಡಲ ಅಮ್ಮೆ ಕೊಡಿಯಾಲ್ ಬೈಲು, ಶ್ರೀ ವಿನಾಯಕ ಮಿತ್ರ ಬಳಗ ಅಮ್ಮೆ ಮಡಿಯಾರ್ ಇದರ ಸಲಹಾ ಸಮಿತಿ ಸದಸ್ಯರಾಗಿ ದುಡಿತಾ ಒಳೊ.

## ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಹೊಸದಾಗಿ ಬರೆವು ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಫುಲ್‌ಸ್ಕೇಪ್ ಹಾಳೆಲಿ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಬರೆನಿ.

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ, ಮಡಿಕೇರಿ – 571 201
ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.

## ಅಕಾಡೆಮಿನ 3 ನೇ ಸಮಿತಿ

ಸರಕಾರಿ ಆದೇಶ ಸಂಖ್ಯೆ : ಕಸಂವಾ 78 ಕಸಧ 2017 ಬೆಂಗಳೂರು ದಿನಾಂಕ 15.12.2017

1. ಶ್ರೀ ಪಿ.ಸಿ. ಜಯರಾಮ , ಅಧ್ಯಕ್ಷರು
ಬಿನ್ ದಿ॥ ಚಿನ್ನಪ್ಪ ಗೌಡ, ಪಾಲ್ತಾಡು ಮನೆ, ಮಡಪಾಡಿ ಅಂಚೆ ಮತ್ತು ಗ್ರಾಮ
ಸುಳ್ಯ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ. : 9448625224

2. ಶ್ರೀ ಮಾಧವಗೌಡ, ಸದಸ್ಯರು
ಕಾಮಧೇನು, ಬೆಳ್ಳಾರೆ, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ. : 9880040163

3. ಶ್ರೀಮತಿ ತಿರುಮಲೇಶ್ವರಿ,ಸದಸ್ಯರು
ಕೋಂ: ಲಕ್ಷ್ಮಣಗೌಡ, ಅರ್ಬಡ್ಕ ಮನೆ, ಜಾಲ್ಸೂರು ಅಂಚೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ.
ಮೊ. : 9901430797

4. ಶ್ರೀ ಚಿದಾನಂದ, ಸದಸ್ಯರು
ಬಿನ್: ಬಾಬುಗೌಡ ಬೈಲಾಡಿ, ಬೈಲಾಡಿ ಮನೆ, ಇರ್ದೆ, ಬೆಟ್ಟಂಪಾಡಿ ಅಂಚೆ,
ಪುತ್ತೂರು ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ. : 9448445829

5. ಶ್ರೀ ಯತೀಶ್ ಕುಮಾರ್ ಗೌಡ, ಸದಸ್ಯರು
ಬಿನ್: ಮೋನಪ್ಪಗೌಡ, ಸಂಪ್ಯಾಡಿ ಮನೆ, ರಾಮಕುಂಜ ಅಂಚೆ ಮತ್ತು ಗ್ರಾಮ
ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ.
ಮೊ. : 9686914166

6. ಶ್ರೀ ಪರಶುರಾಮ ಚಿಲ್ತಡ್ಕ, ಸದಸ್ಯರು
ಬಿನ್: ಚಿನ್ನಪ್ಪಗೌಡ, ಚಿಲ್ಲತಡ್ಕ ಮನೆ, ನಡಗಲ್ಲು ಅಂಚೆ, ನಾಲ್ಕೂರು ಗ್ರಾಮ,
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ.
ಮೊ. : 9481959171

7. ಶ್ರೀ ಕೆ.ಟಿ. ವಿಶ್ವನಾಥ್, ಸದಸ್ಯರು
ಬಿನ್: ತಿಮ್ಮಪ್ಪಗೌಡ, ಕೈಕುಡಿ ಮನೆ, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ.
ಮೊ. : 9448464593

8. ಶ್ರೀ ದೇವರಾಜ್ ಬಿ.ಡಿ, ಸದಸ್ಯರು
ಬಿನ್: ದಾಮೋದರ, ಬೇಕಲ ಮನೆ, ಕರಿಕೆ ಗ್ರಾಮ, ದಕ್ಷಿಣ ಕನ್ನಡ ಜಿಲ್ಲೆ.
ಮೊ. : 9448869861

9. ಶ್ರೀ ಬಾರಿಯಂಡ ಜೋಯಪ್ಪ, ಸದಸ್ಯರು,
ಬಾರಿಯಂಡ ಮನೆ, ಮದೆ ಗ್ರಾಮ ಮತ್ತು ಅಂಚೆ,
ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ.
ಮೊ. : 9481770584

10. ಶ್ರೀಮತಿ ಕಡ್ಲೇರಾ ತುಳಸಿ ಮೋಹನ್, ಸದಸ್ಯರು
ಕಡ್ಲೇರಾ ಮನೆ, ಬೆಟ್ಟಗೇರಿ ಗ್ರಾಮ ಮತ್ತು ಅಂಚೆ, ಕಾರಗುಂದ ಗ್ರಾಮ
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ.
ಮೊ. : 9483110940

11. ಶ್ರೀಮತಿ ಶ್ವೇತಾ ಮಡಪ್ಪಾಡಿ, ಸದಸ್ಯರು
ಮನೆ ನಂ 19/20ಎ, 6ನೇ ಮುಖ್ಯ ರಸ್ತೆ, 7ನೆ ಅಡ್ಡರಸ್ತೆ, ಸರಸ್ವತಿಪುರಂ
ಮೈಸೂರು-09
ಮೊ. : 7019188932

12. ಶ್ರೀ ಎ.ಕೆ. ಹಿಮಕರ, ಸದಸ್ಯರು
ಗುತ್ತಿಗಾರು ಅಂಚೆ, ಸುಳ್ಯ ತಾಲ್ಲೂಕು, ದ.ಕ 574218
ಮೊ. : 9481267121

13. ಶ್ರೀ ಪ್ರಸನ್ನ ಕೆ.ಟಿ., ಸಹ ಸದಸ್ಯರು
ಬಿನ್: ತಿಮ್ಮಯ್ಯ ಕೆ.ಎ., "ಕಾಫಿಕಳ" ಎಸ್ಟೇಟ್,
ಮಕ್ಕಂದೂರು ಗ್ರಾಮ ಮತ್ತು ಅಂಚೆ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ.
ಮೊ. : 9480022923

14. ಶ್ರೀ ಕೆ.ಎ.ಮೊಣ್ಣಪ್ಪ, ಸಹ ಸದಸ್ಯರು
ಬಿನ್: ಅಪ್ಪಚ್ಚ ಕೆ.ಎ., ಬ್ಲಾಕ್ ನಂ 09, "ಕೌಸ್ತುಭ ನಿಲಯ"
ಹೋಟೆಲ್ ಕೂರ್ಗ್ ಇಂಟರ್ ನ್ಯಾಷನಲ್ ಹಿಂಭಾಗ
ಕಾನ್ವೆಂಟ್ ರಸ್ತೆ, ಮಡಿಕೇರಿ, ಕೊಡಗು ಜಿಲ್ಲೆ.
ಮೊ. : 9844187261

15. ಶ್ರೀ ಸುರೇಶ್ ಎಂ.ಹೆಚ್., ಸಹ ಸದಸ್ಯರು
ಬಿನ್: ಹುಕ್ರಪ್ಪ ಗೌಡ, ಅಮೈ, ಮಡಪ್ಪಾಡಿ, ಉಬರಡ್ಕ, ಮಿತ್ತೂರು ಗ್ರಾಮ, ಸುಳ್ಯ
ಮೊ. : 9449387181




2-3-2018 ರಂದ್ ಮಡಿಕೇರಿಲ ನಡ್ದ ಕವನ-ಕುಂಚ ಕಾರ್ಯಕ್ರಮಲ
ಕವನ ಓದುತ್ತಿರುವ ಡಾ|| ಕರುಣಾಕರ



ಕವನ-ಕುಂಚ ಕಾರ್ಯಕ್ರಮಲ ಚಿತ್ರ ಬುಡ್ಸುತ್ತಿರುವ ಕಲಾವಿದ ಕೋಡಿ ಭರತ್




ಕವನ-ಕುಂಚ ಕಾರ್ಯಕ್ರಮಲ ಮಡಿಕೇರಿ ಲಿಟ್ಲ್ ಫ್ಲವರ್ ವಿದ್ಯಾ ಸಂಸ್ಥೆ ಮಕ್ಕಳ ನೃತ್ಯ

HINGARA
Date: 10.04.2018 Kodagu
Arebhashe Quarterly
KARARB/2016/69571
Volume -2, Issue -5
Price : 20/- Pages : 84



2-3-2018 ರಂದ್ ಮಡಿಕೇರಿಲ ನಡ್ಡ
ಕವನ-ಕುಂಚ ಕಾರ್ಯಕ್ರಮದ ಉದ್ಘಾಟನೆ



ಕವನ-ಕುಂಚ ಕಾರ್ಯಕ್ರಮಲ 'ಸಫಲ' ಪುಸ್ತಕದ ಬುಡುಗಡೆ

Printed by UMARABBA on behalf of Registar, Karnataka Arebhase Samskruthi Mathu Sahitya Academy, and, Published by UMARABBA on behaf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : UMARABBA

Ptd@Sri Krishna Printers.
Mob : 94481 35592